## ‘ಕರ್ನಾಟಕ ಲೋಚನ’



**ಲೇಖನಗಳು–ಟಿಪ್ಪಣಿಗಳು**

ಸಂಶೋಧನಾತ್ಮಕ, ಪಾಂಡಿತ್ಯ-ವಿದ್ವತ್ಪೂರ್ಣ ಲೇಖನಗಳು ಹಾಗೂ ಹೊಸದಾಗಿ ಪ್ರಕಟವಾಗುವ ಉತ್ತಮ ಮಟ್ಟದ ಸಂಪಾದಿತ ಗ್ರಂಥಗಳು ಮತ್ತು ಶಾಸ್ತ್ರ ಸಾಹಿತ್ಯದ ಗ್ರಂಥಗಳು-ಇವುಗಳ ಮೇಲಣ ವಿಮರ್ಶೆಗಳು ವಿದ್ವದ್ವಿಚಾರ ಮತ್ತು ವಿದ್ವತ್ ಪ್ರಪಂಚದ ವಿದ್ಯಮಾನ, ಇವುಗಳಿಗೆ ಸಂಬಂಧಿಸಿದ ಟೀಕೆ-ಟಿಪ್ಪಣಿಗಳು-ಇವುಗಳಿಗೆ ‘ಕರ್ನಾಟಕ ಲೋಚನ’ ಮೀಸಲಾಗಿದೆ.

ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಜವಾಬುದಾರರು; ಅವು ಅವಶ್ಯವಾಗಿ ಪ್ರತಿಷ್ಠಾನದ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಎಂದು ತಿಳಿಯತಕ್ಕದ್ದಲ್ಲ.

**ಲೇಖನಗಳಿಗೆ ಆಹ್ವಾನ**

ಮೇಲ್ಕಂಡ ವಾಕ್ಯವೃಂದದಲ್ಲಿ ವ್ಯಕ್ತಪಟ್ಟಿರುವ ಆಶಯಕ್ಕೆ ಅನುಗುಣವಾಗಿ ಲೇಖನಗಳನ್ನು ವಿದ್ವಾಂಸರೂ ಭಾಷೆ ಸಾಹಿತ್ಯಗಳ ಪ್ರೌಢ ವಿದ್ಯಾರ್ಥಿಗಳೂ ಕಳಿಸಿಕೊಡಬೇಕೆಂದು ವಿನಂತಿ. ಲೋಚನದ ಗಾತ್ರ ಪರಿಮಿತವಾದ್ದರಿಂದ ಲೇಖನಗಳು ಅಚ್ಚಿನ ೬-೮ ಪುಟಗಳ ಪರಿಮಿತಿಯಲ್ಲಿ ಇದ್ದರೆ ಅನುಕೂಲ. ಲೇಖನಗಳು ಹಾಳೆಯ ಒಂದೇ ಪಕ್ಕದಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಅಡಿ ಟಿಪ್ಪಣಿಗಳನ್ನು ಪುಟದ ಅಡಿಯಲ್ಲಿಯೇ ಕಾಣಿಸುವುದು ಒಳಿತು. ಗ್ರಂಥ-ಲೇಖನಾಧಾರ ವಿವರಗಳನ್ನು (Bibliography) ಲೇಖನದ ಕಡೆಯಲ್ಲಿ ಕೊಡಬಹುದು. ಲೇಖನವನ್ನು ಹಿಂದಿರುಗಿಸಲಾಗದ್ದರಿಂದ ಲೇಖಕರು ತಮ್ಮ ಲೇಖನದ ಒಂದು ಪ್ರತಿಯನ್ನು ಉಳಿಸಿಕೊಂಡಿರಬೇಕಾಗಿ ವಿನಂತಿ.

# ಉದ್ದೇಶಿತ ಬಿ.ಎಂ.ಶ್ರೀ ಕಲಾಭವನ



ಬೆಂಗಳೂರಿನಲ್ಲಿ ಆಚಾರ್ಯ ಬಿ.ಎಂ.ಶ್ರೀ. ಸ್ಮಾರಕವಾಗಿ ಬಿ.ಎಂ.ಶ್ರೀ ಕಲಾಭವನವನ್ನು ನಿರ್ಮಿಸಲು ಸಂಸ್ಥಾಪಕ ಸೀತಾರಾಮಯ್ಯನವರು ಸತತ ಪರಿಶ್ರಮದಿಂದ ೧೯೮೫ರಲ್ಲಿ ನಗರಸಭೆಯಿಂದ ಪಡೆದಿದ್ದ ನಿವೇಶನವನ್ನು ನಾವು ೧೯೯೫ರಲ್ಲಿ ಸರ್ಕಾರದಿಂದ ಪಡೆದು ೨೪-೧೦-೯೭ರಂದು ಶಂಕುಸ್ಥಾಪನೆ ಮಾಡಿ ೩-೨-೨೦೦೧ ರಂದು ನೆಲಮಹಡಿಯನ್ನು ಉದ್ಘಾಟನೆ ಮಾಡಲಾಯಿತು.

ಪ್ರತಿಷ್ಠಾನದ ಇತಿಹಾಸದಲ್ಲಿ ಇದೊಂದು ಮೈಲಿಗಲ್ಲು. ಅಂದಿನಿಂದಲೇ ತನ್ನ ಕಚೇರಿಯನ್ನು ಈ ನೂತನ ವಿಳಾಸದಲ್ಲಿ ಆರಂಭಿಸಿ ೨೦ನೇ ವರ್ಷಕ್ಕೆ ತನ್ನ ಕಾಲಮೇಲೆ ನಿಲ್ಲುವಂತಾಗಿದೆ.

ಭವನ ಇನ್ನೂ ಮೂರು ಮಹಡಿಗಳನ್ನು ಹೊಂದಬೇಕಾಗಿದ್ದು ಸು. ೪೦ ಲಕ್ಷ ರೂ.ಗಳ ವೆಚ್ಚದಲ್ಲಿ ಸಭಾಂಗಣ, ಗ್ರಂಥಾಲಯ, ಹಸ್ತಪ್ರತಿ ಸಂಗ್ರಹಾಲಯ, ಸ್ಥಿರ ವಸ್ತು ಸಂಗ್ರಹಾಲಯ, ಉಪನ್ಯಾಸ-ಸಮಿತಿ ಕೊಠಡಿಗಳು ಬರಬೇಕಾಗಿದೆ.

ಕನ್ನಡ ಜನತೆ ಹೊಸಗನ್ನಡ ಯುಗ ಪ್ರವರ್ತಕರಾದ ಬಿ.ಎಂ.ಶ್ರೀ.ಯವರ ಈ ಮಾದರಿ ಕವಿ ಸ್ಮಾರಕವನ್ನು ಪೂರ್ಣ ಮಾಡಲು ಸಹಕರಿಸಬೇಕೆಂದು ಕೋರುತ್ತಿದ್ದೇವೆ.

ಸಿದ್ಧವಾಗಿರುವ ಬಿ.ಎಂ.ಶ್ರೀ ಕಲಾಭವನದ ನೆಲಮಹಡಿ



# 'ಶ್ರೀ ಭವನ'ಕ್ಕೆ ಸಹಾಯ ಮಾಡಿ

ಶ್ರೀಕಲಾಭವನದ ನಿರ್ಮಾಣ ವೆಚ್ಚ ನಲವತ್ತು ಲಕ್ಷ ರೂ.ಗಳಾಗಬಹುದೆಂದು ಅಂದಾಜು ಮಾಡಲಾಗಿದೆ. ಸಾಹಿತ್ಯ ಪ್ರೇಮಿಗಳು, ಸಾಹಿತ್ಯಾಸಕ್ತರು, ಸಾಂಸ್ಕೃತಿಕ ಶ್ರೇಯೋಭಿಲಾಷಿಗಳಿಂದ ಉದಾರವಾದ ಧನಸಹಾಯವನ್ನು ಕೋರುತ್ತೇವೆ. ಒಂದು ಇಡೀ ಅಂತಸ್ತು ಅಥವಾ ಒಂದು ಕೊಠಡಿ ನಿರ್ಮಾಣದ ವೆಚ್ಚ ಭರಿಸುವವರನ್ನು ನಿರೀಕ್ಷಿಸುತ್ತೇವೆ. ಆದರೂ ಅಭಿಮಾನಿಗಳು ನೀಡುವ ಯಾವುದೇ ಅಲ್ಪದಾನವನ್ನು ಪ್ರತಿಷ್ಠಾನವು ಸಂತೋಷದಿಂದ ಮತ್ತು ಕೃತಜ್ಞತೆಯಿಂದ ಸ್ವೀಕರಿಸುತ್ತದೆ. ಈ ಮೂಲಕ ನಾಡಿನ ಒಂದು ಭವ್ಯ ಸಾಂಸ್ಕೃತಿಕ ಪರಂಪರೆ (ಸಂರಕ್ಷಣೆ, ಬೆಳವಣಿಗೆ, ಪ್ರಸರಣೆ)ಯಲ್ಲಿ ಪಾಲುದಾರರಾಗಲು ಮನವಿ ಮಾಡಿಕೊಳ್ಳುತ್ತೇವೆ.

ಸದ್ಯಕ್ಕೆ ನೆಲಮಹಡಿ ಸಿದ್ಧವಾಗಿದ್ದು, ಸಭಾಂಗಣದ ನಿರ್ಮಾಣ ಕಾರ್ಯ ಆರಂಭವಾಗಬೇಕಾಗಿದೆ. ದಾನಿಗಳು ಪ್ರತಿಷ್ಠಾನಕ್ಕೆ ನೀಡುವ ಕಟ್ಟಡ ನಿಧಿ ದಾನಕ್ಕೆ ಸೆಕ್ಷನ್ ೮೦ ಆದಾಯ ತೆರಿಗೆ ಆಕ್ಟ್ ೧೯೬೧ ಪ್ರಕಾರ, ಪತ್ರ ಸಂಖ್ಯೆ : ಟ್ರಸ್ಟ್/೭೧೮/೧೦G/೩೮೦/೯೭-೯೮/ಸಿಐಟಿII ದಿನಾಂಕ ೧೨-೨-೯೮ರ ಮೂಲಕ ೨೦೦೨ರವರೆಗೆ ಆದಾಯ ತೆರಿಗೆ ವಿನಾಯಿತಿ ಸೌಲಭ್ಯವಿದೆ.

ಚೆಕ್ಕು - ಅಥವಾ ಡಿ.ಡಿ.ಗಳನ್ನು 'ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ'ದ ಹೆಸರಿನಲ್ಲಿ ಬರೆದು, ಗೌ॥ ಕಾರ್ಯದರ್ಶಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬಿ.ಎಂ.ಶ್ರೀ. ಕಲಾಭವನ, ನರಸಿಂಹರಾಜಾ ಕಾಲೋನಿ, ಬೆಂಗಳೂರು-೫೬೦ ೦೧೯, ಇಲ್ಲಿರುವ ಪ್ರತಿಷ್ಠಾನದ ಕಾರ್ಯಾಲಯಕ್ಕೆ ಕಳಿಸಿಕೊಡಲು ಸಾರ್ವಜನಿಕರಲ್ಲಿ ಮನವಿ ಮಾಡಿಕೊಳ್ಳುತ್ತೇವೆ.

| ಎನ್. ಬಸವಾರಾಧ್ಯ | ನಿಟ್ಟೂರು ಶ್ರೀನಿವಾಸರಾವ್ |
|---|---|
| ಪ್ರತಿಷ್ಠಾನದ ಅಧ್ಯಕ್ಷರು | ಸಂಪನ್ಮೂಲ ಸಮಿತಿ ಅಧ್ಯಕ್ಷರು |

# ಕರ್ನಾಟಕ ಲೋಚನ

## ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬಿ.ಎಂ.ಶ್ರೀ ಕಲಾಭವನ
ಎನ್. ಆರ್. ಕಾಲೋನಿ, ಬೆಂಗಳೂರು-೫೬೦ ೦೧೯
ದೂರವಾಣಿ : ೬೬೧೫೪೮೭೭ ಇಮೇಲ್ : bmsri/trust@yahoo.com
ವೆಬ್‌ಸೈಟ್ : http://in.members.tripodasia.com/bmsri/

ಅಧ್ಯಕ್ಷರು : ಎನ್. ಬಸವಾರಾಧ್ಯ
ಸಂಪಾದಕರು : ಎಸ್. ವಿ. ಶ್ರೀನಿವಾಸರಾವ್
ಸಹಾಯಕ ಸಂಪಾದಕರು : ಎನ್. ಎಸ್. ರಾಮಸ್ವಾಮಿ ಅಯ್ಯರ್
ವ್ಯವಸ್ಥಾಪಕ ಸಂಪಾದಕರು : ಪ್ರೊ|| ನಾ. ಗೀತಾಚಾರ್ಯ

ಸಂಪುಟ ೧೪ ಜೂನ್ ೨೦೦೧ ಸಂಚಿಕೆ ೧

## ಪರಿವಿಡಿ

**KARNATAKA LOCHANA**

*Halt-Yearly Research Journal, Published by*

**B. M. Sri Smaraka Prathisthana**

**(B. M. Sri Memorial Foundation) N. R. Colony, Bangalore-560 019**

Ph. : 6615877 e-mail : bmsri/trust@yahoo.com

website : http//in.members.tripodasia.com/bmsri/



**Vol.14** **June 2001** **No. 1**

**CONTENTS**

೪. ಜೀವನಡೆ ಸುಖವೆಲ್ಲಿ? ವಿದ್ಯೆಯಿದ್ದುರ್ಮದ್ಯೋಗ
ವೀವರಿಲ್ಲವು ವಾಸಿಸಲು ತಕ್ಕ ಮನೆಯಿಲ್ಲ
ತೀವಿರ್ದ ಬಡತನದೆ ಕಂಗೆಟ್ಟಿವಲ್ಲದೆಯೆ ಸಾಲಿಗರು ಪೀಡಿಸುವರು
ದೇವರೇ ಗತಿಯೀಗ ರೋಗ ಬಾಧೆಗಳಿಂದ
ನೋವುದೇ ನಿತ್ಯವಾದುದು ದಿಕ್ಕುಗಾಣದೆಯೆ
ನಾವಿಲ್ಲ ದಿನಗಳೆಯುತಿರ್ಪೆವೈ ಭಾವಿಪೊಡಸಾರಮೀ ಸಂಸಾರಂ.

(ವಾರ್ಧಕ ಷಟ್ಪದಿ) *-ಗಮಕಿ ಆರ್. ಶಂಕರನಾರಾಯಣ್*

೫. ಸತಿಪುತ್ರ ಪೌತ್ರರ ವಿಧೇ
ಯತೆ ತೋರ್ಪರೆ? ವಸತಿವಂತನಲ್ಲವೆ? ವೆಚ್ಚ
ಕ್ಕತಿಶಯದರ್ಜನೆಯಿಲ್ಲವೆ?
ಗತಿಯೇಂ? ಭಾವಿಪೊಡೆಸಾರಮೀ ಸಂಸಾರಂ ॥

*-ಕೆ. ವಿ. ರಾಜಗೋಪಾಲ್*

೬. ಬೆಂಗಳೂರಲಿ ಸ್ವಂತ ಮನೆಯಿರೆ
ಅಂಗನೆಯು ಅಂದದಲಿ ಒಪ್ಪಿರೆ
ಸಂಗಡದಿ ಇಬ್ಬರೇ ಮಕ್ಕಳಿರೆ ಗಿಂಬಳ ಬೇಡದ
ಭಂಗಪಡಿಸದ ಸಂಬಳದ ಜೊತೆ
ಹಂಗೆ ಅಡ್ಡಾಡೆ ಕಾರಿರುವಾಗ
ಹೆಂಗೆ ಸ್ವಾಮೀ 'ಭಾವಿಪೊಡಸಾರಮೀಸಂಸಾರಂ'

(ಭಾಮಿನಿ ಷಟ್ಪದಿ) *-ನಾ. ಗೀತಾಚಾರ್ಯ*



*ಮುಂದಿನ ಸಂಚಿಕೆಯ ಸಮಸ್ಯಾ ವಾಕ್ಯ :*

''ಕಿವಿಗುಂ ಸುಧೆಸುರಿಪ ಕವಿಯೆ ಮಾಕವಿಯಲ್ತೇ?''

*ಸೂಚಕರು : ಪ್ರೊ॥ ಗರ್ಗೇಶ್ವರಿ ವೆಂಕಟಸುಬ್ಬಯ್ಯ*

# ಸಮಸ್ಯಾಪೂರಣ

ವಿದ್ವತ್ಪತ್ರಿಕೆಯಾಗಿರುವ ಈ 'ಕರ್ನಾಟಕ ಲೋಚನ'ದಲ್ಲಿ ಸಂಪುಟ ೬, ಸಂಚಿಕೆ ೧, ಜೂನ್ ೧೯೯೩ ಮೊದಲ್ಗೊಂಡು 'ಸಮಸ್ಯಾಪೂರಣ' ಎಂಬ ಅಂಕಣವನ್ನು ಪ್ರಾರಂಭಿಸಲಾಗಿದೆ. ಇದು ಕನ್ನಡಕ್ಕೆ ಅತಿಶಯ ಲಕ್ಷಣವೆನಿಸುವ ಪ್ರಾಸ-ಪಾದ-ಛಂದೋಬದ್ಧ ಪದ್ಯ ಕವಿತಾ ರಚನೆಗೆ ಸಜೀವತೆಯನ್ನು ನೀಡುವ ಉದ್ದೇಶವುಳ್ಳದ್ದು. ಪ್ರತಿ ಸಂಚಿಕೆಯಲ್ಲಿಯೂ ಅದರ ಮುಂದಣ ಸಂಚಿಕೆಗಾಗಿ ಸಮಸ್ಯಾ ಪದ್ಯದ ಒಂದು ಪಾಠವನ್ನು ಕೊಡಲಾಗುತ್ತದೆ. ಒಬ್ಬೊಬ್ಬರಿಂದ ಒಂದೊಂದು ಪದ್ಯ ಮಾತ್ರ ಸ್ವೀಕಾರಾರ್ಹ. ಈ ಸಂಚಿಕೆಗಾಗಿ ಕೊಡಲಾದ ಸಮಸ್ಯಾ ವಾಕ್ಯ ಹೀಗಿದೆ.

**'ಭಾವಿಪೊಡಸಾರ ಮೀ ಸಂಸಾರಂ'**

*-ರನ್ನ*

೧. **ಇಳೆಯ ಬಾಳಿನ ಮೋಹ ಮುದ್ರೆಯ**
**ನಳಿಪುದಾವುದದೆಲ್ಲಿಹುದೋ ಆ**
**ನಳಿನನಾಭನ ನೆನೆವ ಮಾರ್ಗವ ತಡೆಯುತಡಹಾಯ್ದು ।**
**ಬಳಸಿ ಬಂದೀ ಧರೆಯ ಭೋಗದಿ**
**ಮುಳುಗಿಸುವುದೀಸುಳಿ ಭವಾವಳಿ**
**ಹೊಳಪಿನಿರ್ದುಮಸಾರಮೀ ಸಂಸಾರಭಾವಿಪೊಡೆ**

*-ಎಂ. ಆರ್. ಅನಂತರಾಮಯ್ಯ*

೨. **ಪರಿಪರಿ ವೇಷದಲುದರಂ**
**ಭರಣವಗೈಯುತ ಮರುಳ್ಗೊಳಿಸೆ ಸಜ್ಜನರಂ**
**ಬರಿದೇ ಠಕ್ಕರೆನಿಪರು**
**ದ್ಗರಿಪರು : ಭಾವಿಪೊಡಸಾರ ಮೀ ಸಂಸಾರಂ ॥**

*-ಡಾ॥ ಪಿ. ವಿ. ನಾರಾಯಣ*

೩. **ನೇರನೆಯ ಕಂದಕ್ಕೆ**
**ಚಾರುವಾರ್ಧಕ ಕುಸುಮ**
**ವಾರಡಿಗೆಯೀರಡಿಗೆ ಚೌಪದಿಗೆಯು**
**ಸೇರುವುದು ವಿರಚಿಸಿಯೆ**
**ತೋರುವೆನು-ಭಾವಿಪೊಡ**
**ಸಾರಮೀ ಸಂಸಾರಮೆಂಬುಕ್ತಿಯು**

(ಕುಸುಮಷಟ್ಪದಿ) *-ವಿದ್ವಾನ್ ಟಿ. ಕೇಶವಭಟ್ಟ*

5

# ಯಕ್ಷಗಾನದಲ್ಲಿ ಮದನವತಿ ಛಂದಸ್ಸು

- ಡಾ॥ ಕಬ್ಬಿನಾಲೆ ವಸನ್ತ ಭಾರದ್ವಾಜ

*ಮದನನ ತಂದೆಯ ಗಣಮವು ವಿಷಯದೊಳಿರೆಗುರು ಮುಂ ।*
*ದೊದವಿರೆ ಪದದೊಳಮದರವೊಲಪ್ಪುದು ಹರಪದ ಮುಂ ॥*
*ವಿದಿತಮುಪೇಂದ್ರ ಚತುಷ್ಟಯದತ್ತಲಬುಜವದನೇ ।*
*ಮದನಹರತ್ರಯದಿಂ ಹರಿ ಕಡೆಪಡೆ ಮದನವತೀ ॥*

(ಛಂದೊಂಬುಧಿ : ಸಂ. ಕುಕ್ಕಿಲ ಕೃಷ್ಣಭಟ್ಟ, 5-16, 1975)

ಇದು ನಾಗವರ್ಮನ ಛಂದೋಬುಧಿಯಲ್ಲಿ ದೊರೆಯುವ ಲಕ್ಷ್ಯ ಲಕ್ಷಣ ಪದ್ಯ. ಒಂದೇ ಪದ್ಯದಲ್ಲಿ ನಾಲ್ಕು ರೀತಿಯ ಸಂಭಾವ್ಯ ಲಕ್ಷಣವನ್ನು ತಿಳಿಸುವಂತಹ ರಚನೆಯಿದು. ಇಲ್ಲಿ ಕ್ರಮವಾಗಿ ಐದು ವಿಷ್ಣುಗಣ + ಒಂದು ಗುರು; ನಾಲ್ಕು ವಿಷ್ಣುಗಣ + ಒಂದು ರುದ್ರಗಣ; ನಾಲ್ಕು ವಿಷ್ಣುಗಣ + ಒಂದು ಬ್ರಹ್ಮಗಣ ಮತ್ತು ಮೂರು ರುದ್ರಗಣ + ಒಂದು ವಿಷ್ಣುಗಣ ಎಂಬ ಲಕ್ಷಣ ನಿರೂಪಣೆ ವ್ಯಕ್ತವಾಗುತ್ತದೆ. ಇದರರ್ಥ ನಾಲ್ಕು ಪಾದಗಳಲ್ಲಿ ನಾಲ್ಕು ರೀತಿಯ ಲಕ್ಷಣವೆಂದಲ್ಲ. ನಾಲ್ಕು ರೀತಿಯ ಲಕ್ಷಣಸಾಧ್ಯತೆಯನ್ನು ಒಂದೇ ಸೂತ್ರದಲ್ಲಿ ಹೇಳಲಾಗಿದೆ ಎಂದಷ್ಟೆ ಗ್ರಹಿಸಬೇಕು. ಈ ವಿನ್ಯಾಸದಲ್ಲಿ ಮೊದಲ ಮೂರು ಲಕ್ಷಣಗಳು ವಿಷ್ಣುಗಣಲಯದಲ್ಲೂ, ನಾಲ್ಕನೆಯದು ರುದ್ರಗಣಲಯದಲ್ಲೂ ಪ್ರವಹಿಸುತ್ತದೆ. ಮದನಗಣ (ವಿಷ್ಣುಗಣ)ಗಳ ಆಧಿಕ್ಯದಿಂದಲೇ ಇದಕ್ಕೆ 'ಮದನವತಿ'ಯೆಂಬ ಹೆಸರಿರಬಹುದೆಂಬ ಊಹೆಯೂ ಇದೆ. (ಕುಕ್ಕಿಲಕೃಷ್ಣಭಟ್ಟ-ಪೂರ್ವೋಕ್ತ. ಪುಟ 86) ಆದರೆ ಪದ್ಯಾರಂಭದ 'ಮದನನ ತಂದೆಯ' ಎಂಬ ಪ್ರಯೋಗವನ್ನಾಧರಿಸಿಯೋ ಅಥವಾ ಪತ್ನೀ ಸಂಬೋಧನೆಯಿಂದಲೋ 'ಮದನವತಿ' ಎಂಬ ಹೆಸರು ಬಂದಿರಲೂ ಸಾಧ್ಯವಿದೆ. ಈ ಛಂದೋಬಂಧದಲ್ಲಿ "ಮದನಗಣ + ರತಿಗಣ"ಗಳ ಸಂಯೋಜನೆಯಿರುವುದರಿಂದ 'ಮದನರತಿ' ಆಗಿರಲೂ ಸಾಧ್ಯವಿದೆ ಎಂದೆನಿಸುತ್ತದೆ. ಕಾಲಾನುಕ್ರಮದಲ್ಲಿ ಈ 'ಮದನರತಿ'ಯೇ 'ಮದನವತಿ' ಎಂದೆನಿಸಿರಬಹುದು.

ಮದನವತಿಯ ಲಕ್ಷಣ ನಿರೂಪಣೆ ಮಾಡಿದ ಮತ್ತೊಬ್ಬ ಲಾಕ್ಷಣಿಕ ಜಯಕೀರ್ತಿ(ಕಾಲ ಕ್ರಿ. ಶ. 1000). ಅವನ 'ಛಂದೋನುಶಾಸನ'ದ ಲಕ್ಷ್ಯಲಕ್ಷಣ ಪದ್ಯ ಹೀಗಿದೆ -

*ಪ್ರಥಮಕ ಇಹಗುರು ಪರಕೃತಿ ಪರಿಮಿತಲಭೃಪಿತರೇ*
*ವ್ಯಥಪಾದಾ ರತಿಗಣ ಪರಗತಿ ಮದನಗಣಾಸ್ಯುಃ ।*
*ಗ್ರಥಿತಪದಾವಲ ಯಸ್ಯೈಶ್ಚೇದಿತಿ ಮದನವತೀ*
*ಪ್ರಥಿತಯತಿಃ ಪ್ರತಿ ಚರಣಂ ದ್ವಾವಿಂಶತಿ ಮಾತ್ರಾ ॥*

(ಛಂದೋನುಶಾಸನಃ 7-19)

ಇದರ ಪ್ರಕಾರ ಮೊದಲ ಪಾದದ ಕೊನೆಗೊಂದು 'ಗುರು'ವೂ, ಇತರ ಪಾದಗಳ ಕೊನೆಗೆ 'ಬ್ರಹ್ಮಗಣ' (ರತಿಗಣ)ವೂ ಬರಬೇಕಾಗುತ್ತದೆ. ಉಳಿದಂತೆ ಮೊದಲ ಪಾದದಲ್ಲಿ ಐದು ವಿಷ್ಣುಗಣಗಳೂ, ಇತರ ಪಾದಗಳಲ್ಲಿ ನಾಲ್ಕು ವಿಷ್ಣುಗಣಗಳೂ ಇರಬೇಕು. ನಾಗವರ್ಮನ ಸೂತ್ರಪದ್ಯಕ್ಕೆ ಹೋಲಿಸಿದರೆ ಇಲ್ಲಿ ಕಂಡುಬರುವ ಪ್ರಮುಖ ವ್ಯತ್ಯಾಸವೆಂದರೆ, ಒಟ್ಟು 22 ಮಾತ್ರೆಗಳಿರಬೇಕೆಂಬ ಹೇಳಿಕೆ. ಹಾಗಾಗಿ ಅಂಶಗಣಗತಿಯ ಪದ್ಯಬಂಧದಲ್ಲಿ ಮಾತ್ರಾಗತಿ ಸ್ಫುರಣೆಗೂ ಅವಕಾಶವಿದೆ ಎಂದ ಹಾಗಾಯ್ತು. ದಿ|| ಎಚ್. ಶೇಷ ಅಯ್ಯಂಗಾರ್ ಅವರು ಸಂಪಾದಿಸಿದ 'ಛಂದೋಬುಧಿ"ಯಲ್ಲಿ ದೊರಕುವ ತ್ರಿಪದಿಯೊಂದು ಮದನವತಿಗೆ 22 ಮಾತ್ರೆಗಳಿರಬೇಕೆಂಬುದನ್ನು ಸ್ಪಷ್ಟಪಡಿಸುತ್ತದೆ.

*ಗಣನಿಯಮಂಗಳ ಗಣಿಸಲಿಲ್ಲೆನಬೇಡ*
*ಗಣಿಯಿಸಲಿರ್ಪತ್ತೆರಡು ಮಾತ್ರೆಯಕ್ಕುಂ*
*ಗುಣಯುತೆ ಮದನವತಿಗೆಂದುಂ ||*

(5-18)

ನಾಗವರ್ಮನ ಸೂತ್ರಪದ್ಯದಲ್ಲಿ ಮಾತ್ರಾಗಣ ವ್ಯವಸ್ಥೆಯ ಬಗ್ಗೆ ಯಾವುದೇ ಸೂಚನೆ ಇಲ್ಲದಿದ್ದರೂ ಮಾತ್ರಾಗಣ ವಿವಕ್ಷೆ ಸ್ಪಷ್ಟವಾಗಿದೆ. ಅಲ್ಲಿ ಚತುರ್ಮಾತ್ರಾಗತಿ ತುಂಬಾ ಸಹಜವಾಗಿ ಉನ್ಮೀಲನಗೊಂಡಿರುವುದರಿಂದ ನಾಗವರ್ಮ-ಜಯಕೀರ್ತಿಯರ ಕಾಲದಲ್ಲಿ ಮದನವತಿಯನ್ನು ಹಾಡುತ್ತಿದ್ದ ಕ್ರಮ ಕೂಡಾ ಹಾಗಿದ್ದಿರಬಹುದೆಂದು ಊಹಿಸಲಿಕ್ಕೆ ಅವಕಾಶವಿದೆ.

ವಿಷ್ಣುಗಣಗಳು ಚತುರ್ಮಾತ್ರಾಗತಿಗೆ ಹೊರಳಲು ಸಾಧ್ಯವಿರುವುದರಿಂದ 'ಐದು ವಿಷ್ಣು + ಒಂದು ಗುರು' ವಿನ್ಯಾಸ 'ಐದು ಚತುರ್ಮಾತ್ರಾಗಣ + ಒಂದು ಗುರು'ವೆನಿಸಿ ಒಟ್ಟು 22 ಮಾತ್ರೆಗಳಾಗಲು ಸಾಧ್ಯ. ಆದರೆ ನಾಗವರ್ಮನ ಸೂತ್ರದಂತೆ 'ಮೂರು ರುದ್ರ + ಒಂದು ವಿಷ್ಣು' ಗಣವಿರುವಾಗ ಮಾತ್ರಾಗತಿಸ್ಫುರಣೆ ಹೇಗೆ ಸಾಧ್ಯ ಎಂಬ ಪ್ರಶ್ನೆ ಬರುತ್ತದೆ. ರುದ್ರಗಣಗಳಲ್ಲಿ ಶೂಲಧರಂ ( —UU—), ಪುರಮಥನಂ (UUUU—), ಭೂತಾಗ್ರಣಿ (——UU), ತ್ರಿಜಗದ್ಗುರು (UU—UU) ಎಂಬ ವಿನ್ಯಾಸಗಳು ಬಂದಾಗ ಆರು ಮಾತ್ರೆಯ ಮೌಲ್ಯ ಉಂಟಾಗುವುದರಿಂದ ಷಣ್ಮಾತ್ರಾಗತಿಯ ಗಾಯನಕ್ರಮವನ್ನು ಮದನವತಿಗೆ ಆರೋಪಿಸಬಹುದು. ಆಗಲೂ 6+6+6+4 ಎಂಬ ಇಪ್ಪತ್ತೆರಡು ಮಾತ್ರೆಗಳ ನಿಯತಿ ಸಾಧ್ಯವಾಗುತ್ತದೆ.

ಜಯಕೀತಿಯು ಸೂಚಿಸುವ ಲಕ್ಷಣದಂತೆ ಪದ್ಯಪಾದದಲ್ಲಿರುವ 'ನಾಲ್ಕು ವಿಷ್ಣು + ಒಂದು ಬ್ರಹ್ಮ' ವಿನ್ಯಾಸವು ಗಣವಿಭಜನೆಯ ವ್ಯತ್ಯಾಸದಿಂದಾಗಿ 'ಮೂರು ರುದ್ರ + ಒಂದು ಬ್ರಹ್ಮ'ವಾಗುವುದು ಸಾಧ್ಯವಾಗುತ್ತದೆ. ಉದಾ:-

ಪ್ರಥಿತಯತಿಃ । ಪ್ರತಿಚರಣಂ । ದ್ವಾವಿಂಶತಿ । ಮಾತ್ರಾ ।

ಇದು ಮರಾಠಿಯ 'ಶುಭಕಾಮೀ' ಬಂಧಕ್ಕೆ ಅನುಗುಣವಾಗಿದೆ.

(ಚಾಶೀಲಜ. ರೀ ದೀಪವು. ನೀಲೋಚನ. ಆಔ. — ಡಿ. ಎಸ್. ಕರ್ಕಿ: ಕನ್ನಡ ಛಂದೋವಿಕಾಸ, ಪುಟ 145) ಇದರಿಂದ 'ನಾಲ್ಕು ವಿಷ್ಣು + ಒಂದು ಬ್ರಹ್ಮ' ಹಾಗೂ 'ಮೂರು ರುದ್ರ + ಒಂದು ಬ್ರಹ್ಮ' ಎಂಬುದು ಛಂದೋಗತಿಯಲ್ಲಿ ಉಂಟಾಗುವ ಎರಡು ಸಾಧ್ಯತೆಗಳೆಂದು ತೀರ್ಮಾನಿಸಬಹುದು.

ಈ ಹಿನ್ನೆಲೆಯಲ್ಲಿ ಯಕ್ಷಗಾನ ಕಾವ್ಯಗಳ ಛಂದೋಬಂಧವನ್ನು ವಿವೇಚಿಸಿದಾಗ ಮದನವತಿಗೆ ಅಲ್ಲಲ್ಲಿ ಉದಾಹರಣೆಗಳು ಸಿಗುತ್ತವೆ.

**ಮೂರು ರುದ್ರಗಣ + ಒಂದು ಬ್ರಹ್ಮಗಣ ವಿನ್ಯಾಸ**

*ಅಂಗಜಸ. ನ್ನಿಭನೆನಾನು. ಅಲ್ಲಿ ಬಂದ. ರೇನು*
*ಕಂಗಳಿಲ್ಲ. ದಾತನ ಪ್ರ. ಸಂಗವೇತ. ಕಿನ್ನು*
*ಸಂಗಡವಿ. ದ್ದೂನೀವೆಲ್ಲ. ಮಾಡಿಸಂತೋ. ಷವನು*
*ಮಂಗಳಾತ್ಮ. ಕನುದಯೆ. ಯಿಂದರಕ್ಷಿ. ಸುವನು*

(ಪಾರ್ತಿಸುಬ್ಬ - ಐರಾವತ)

*ಸೊಲ್ಲಕೇಳಿ. ಸೊಲ್ಲಕೇಳಿ. ಸೊಗಸುಗಾರ. ರವ್ವ*
*ಬಲ್ಲಿದಸು. ಜಾಣೆಮರಿ. ಹುಲ್ಲೆಗಣ್ಣೆ. ನವ್ವ ॥*

(ಪಾರ್ತಿಸುಬ್ಬ - ಕೃಷ್ಣಚರಿತ್ರೆ)

*ಅರಿಯಲೋರ್ವ. ರಿಂದೋರ್ವರು. ಗರುವರು ಪಾಂ. ಡವರು*
*ನೆರೆಸಮರ್ಥ. ನದರೊಳ್ಪಾರ್ಥ. ನುರೆರಣಕೋ. ವಿದನು ॥*

(ಹಟ್ಟಿಯಂಗಡಿ ರಾಮಭಟ್ಟ - ದ್ರೌಪದೀ ಪ್ರತಾಪ)

*ಬೀಸುವಚಾ. ಮರವಾದ್ಯದ. ಘೋಷದಿನ. ರ್ತಿಸುತಾ*
*ವೇಶ್ಯೆಯರ್ಕೈ ತರೆನೋಡಿವಿ. ಲಸದಿಮನ. ವಿಡುತಾ*

(ದೇವೀದಾಸ - ಕೃಷ್ಣಸಂಧಾನ)

ಇವುಗಳಲ್ಲಿ ಕೊನೆಯದು ಷಣ್ಮಾತ್ರಾಗತಿಗೂ ಒಪ್ಪುವ ರಚನೆ. ಇಲ್ಲಿ 'ವಿಲಾಸದಿ ಮನ' ಎಂದಷ್ಟೇ ಪರಿವರ್ತನೆಯುಂಟಾದಾಗ ಪಾದದಲ್ಲಿ 22 ಮಾತ್ರೆಗಳಾಗುವುದು ಸಾಧ್ಯ.

"ನಾಗವರ್ಮನು ಹೇಳಿದ 'ಮೂರು ರುದ್ರ + ಒಂದು ವಿಷ್ಣು' ಗಣವಿನ್ಯಾಸ ಅಂಶವೃತ್ತದ ರಚನೆಗಳಲ್ಲಿ ಅಸಹಜವೆಂದು ತೋರುವುದರಿಂದ ಅದರ ಹೊಂದಿಕೆಯನ್ನು ಲಕ್ಷಿಸಬೇಕಾಗಿಲ್ಲ" ಎಂಬ ಹೇಳಿಕೆಯಿದೆ. (ಡಾ॥ ಟಿ. ವಿ. ವೆಂಕಟಾಚಲ ಶಾಸ್ತ್ರಿ - ಕನ್ನಡ ಛಂಧಃ ಸ್ವರೂಪ, ಪುಟ 431). ಆದರೆ ಯಕ್ಷಗಾನ ಪದ್ಯರಾಶಿಯಲ್ಲಿ ಈ ವಿನ್ಯಾಸದ ಮದನವತಿಗಳೂ ದೊರೆಯುತ್ತವೆ ಎಂಬುದು ಗಮನಾರ್ಹ.

### ಮೂರು ರುದ್ರಗಣ + ಒಂದು ವಿಷ್ಣುಗಣ ವಿನ್ಯಾಸ

1) *ಕುಶಲವರೆಂ. ದುಪೆಸರಿಟ್ಟು. ಬರಹವೆಲ್ಲ. ಬರೆಸಿದೆ*
*ಕುಶಲದಿಂದ. ರಣದಿಬಾಣ. ವೆಸೆವವಿದ್ಯೆ. ಕಲಿಸಿದೆ*
*ಹಸುಮಕ್ಕಳ. ಇಷ್ಟುದಿನ. ಈ ಪರಿಯೊಳ್. ಮೆರೆಸಿದೆ*
*ಅಸುರವೈರಿ. ಇನ್ನು ರಕ್ಷಿ. ಸೆನುತ ಮುಂದೆ. ನಿಲಿಸಿದೆ ॥*

(ಪಾರ್ತಿಸುಬ್ಬ - ಕುಶಲವರ ಕಾಳಗ)

2) *ಏಕೆನೋಳ್ಪೆ. ನಮ್ಮೆಲ್ಲರ. ನೀಕರೆದು. ತಂದೆಯ?*
*ಭೂಕಾಂತರು. ಕುಳಿತಿಹುದ. ಶ್ರೀಕರದಿ. ಕಂಡೆಯ?*
*ಬೇಕಾದಂತ. ವಸ್ತುಗಳ. ನೀತರಿಸಿ. ಕೊಂಡೆಯ?*
*ಈ ಕಡೆಯೊಳ್. ಬಂದುನಿಲ್ಲು. ಏಕೆಮನ. ಸಂಶಯ?*

(ಪಾರ್ತಿಸುಬ್ಬ - ಐರಾವತ)

ಪಾದಾಂತ್ಯದ ನ್ಯೂನಗಣವು ಪದ್ಯಪಾದದ ಪ್ರಧಾನಗಣದಷ್ಟೇ ಕರ್ಷಣ ಕ್ರಿಯೆಗೆ ಒಳಗಾಗುವುದು ಸ್ವಾಭಾವಿಕ ಸಂಗತಿ. ಪಿರಿಯಕ್ಕರದ ಮೊದಲ ಬ್ರಹ್ಮಗಣವು ವಿಷ್ಣುವಾಗುವುದೂ ಕೂಡಾ ಇದೇ ನಿಯಮಕ್ಕೆ ಒಳಪಡುತ್ತದೆ. ಯಕ್ಷಗಾನದಲ್ಲಿ ಅನೇಕ ಕಡೆ ಆದಿಯಲ್ಲಿರುವ ಬ್ರಹ್ಮಗಣ ವಿಷ್ಣುವಾಗುತ್ತದೆ. ಉದಾ:

1) *ನೀನೇ. ಕಲಿಹನು. ಮಾ । ನಮ್ಮವರೊಳು*
*ನೀನೇ. ಕಲಿಹನು. ಮಾ॥*

(ಉಂಗುರ ಸಂಧಿ)

2) *ಹಂಸ. ಕೇತನಾ. ದಿಗಳೆಲ್ಲ. ಕೇಳಿ ।*
*ವಂಶಾಪ. ರಾಧಿಗು. ಪಾಯವ. ಪೇಳಿ ॥*

(ಬಭ್ರುವಾಹನ ಕಾಳಗ)

3) *ವಾನ. ರೇಶ್ವರ. ರೆಲ್ಲರು. ಕೇಳಿ ।*
*ಏನು ಚೋ. ದ್ಯವಿದೆಂದು. ಎನ್ನೊಳು. ಪೇಳಿ ॥*

(ವಾಲಿಸಂಹಾರ)

ವಿಷ್ಣುಗಣ ಪ್ರಧಾನ ಬಂಧದಲ್ಲಿ ಬ್ರಹ್ಮಗಣವು ಕೃತವಿಷ್ಣುವಾದಂತೆ, ರುದ್ರಗಣ ಪ್ರಧಾನ ಮದನವತಿಯಲ್ಲಿ ವಿಷ್ಣುಗಣವು ಕೃತರುದ್ರವಾಗುವುದನ್ನು ಸ್ವೀಕರಿಸಲೇಬೇಕಾಗುತ್ತದೆ. ಹಾಗಾಗಿ 'ಮೂರು ರುದ್ರ + ಒಂದು ವಿಷ್ಣು' ವಿನ್ಯಾಸದ ಛಂದೋಗತಿಯನ್ನು ಅಸಹಜವೆಂದು ಹೇಳಲಾಗದು. ಅದು ಸಂಗೀತಕ್ಕೆ ಹೊಂದುವ ರಚನೆ ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ.

'ಮದನವತಿ' ಮೂಲತಃ ಚಾಕ್ಷುಷವಾಗಿ ಮದನಗಣ ಘಟಿತವೆಂಬ ಭಾಗವನ್ನು ಸ್ವೀಕರಿಸಿದರೂ 'ನಾಲ್ಕು ವಿಷ್ಣು + ಒಂದು ಬ್ರಹ್ಮ' (ಮದನ+ರತಿ) ಎಂಬ ಜಯಕೀರ್ತಿಯ ಲಕ್ಷಣ ನಿರೂಪಣೆ 'ಮೂರು ರುದ್ರ + ಒಂದು ಬ್ರಹ್ಮಕ್ಕೆ' ಸರಿಯಾಗುವುದರಿಂದ, ರುದ್ರ ಗಣಗತಿಯಲ್ಲೂ ಮದನವತಿಯ ಗಾಯನಸ್ವರೂಪ ಇದ್ದಿತೆಂದು ಊಹಿಸಬಹುದು. ಇದಕ್ಕೆ ನಾಗವರ್ಮನ ಲಕ್ಷಣಸೂತ್ರದಲ್ಲಿರುವ 'ವಿದಿತಮುಪೇಂದ್ರ ಚತುಷ್ಟಯದಿಂದಂಬುಜಜನುಂ' ( 4 ವಿ. + 1 ಬ್ರ.) ಹಾಗೂ 'ಮದನಹರ ತ್ರಿತಯಂ ಕಡೆಯೊಳ್ ಮದನ ನಮ್ಮಂ ತಾಂ' (3 ರು. + 1 ವಿ.) ಎಂಬ ಎರಡೂ ಸಾಧ್ಯತೆಗಳ ವಿವಕ್ಷೆ ಇರುವುದನ್ನು ಗಮನಿಸಬಹುದು. ಯಕ್ಷಗಾನದ ಮದನವತಿಗಳಲ್ಲಿ ರುದ್ರಗಣತಿಯೇ ಹೆಚ್ಚಾಗಿರುವುದರಿಂದ ಆ ಪ್ರಸ್ತಾರ ಕ್ರಮವೇ ಮದನವತಿಯ ಜೀವಾಳವೆಂದು ಭಾವಿಸಲು ಆಸ್ಪದವಿದೆ. ಅದು ಕೆಲವೆಡೆ ಮಾತ್ರಾಗತಿಯನ್ನು ಸ್ವೀಕರಿಸುವುದರಿಂದ ಅವೆರಡರ ಸಮಚಾಕವೇ ಮದನವತಿಯ ವೈಶಿಷ್ಟವೆಂದು ತರ್ಕಿಸಬೇಕಾಗುತ್ತದೆ. ಆಧುನಿಕ ಭಾವಗೀತಗಳ ಛಂದೋಬಂಧಗಳಲ್ಲಿಯೂ 6+6+6+3 ಎಂಬ ವಿನ್ಯಾಸವನ್ನು ಬಳಸಿಕೊಳ್ಳಲಾಗಿದೆ. (ಉದಾ: ಪಲ್ಲವಗಳ ಪಲ್ಲವಿಯಲಿ ಗರಿಗೆದರಿದೆ ಗೀತ - ಕೆ. ಎಸ್. ನರಸಿಂಹಸ್ವಾಮಿ) ಇದಕ್ಕೂ ಮದನವತಿಯಿಂದಲೇ ಪ್ರೇರಣೆ ದೊರೆತಿದೆ ಎನ್ನಬಹುದು.

ಆದರೆ ಈ ಪದ್ಯಜಾತಿಗೆ ಪ್ರಾಚೀನ ಕಾವ್ಯಗಳಲ್ಲಿ ಸ್ಥಾನ ದೊರೆಯಲಿಲ್ಲ. ಶಾಸನಗಳಲ್ಲಿ ಬಳಕೆಯಾಗಿರುವುದಕ್ಕೂ ಆಧಾರಗಳಿಲ್ಲ. ಜಯಕೀರ್ತಿ-ನಾಗವರ್ಮರ ಲಕ್ಷಣಲಕ್ಷ್ಯ ಪದ್ಯ ಬಿಟ್ಟರೆ, ಇದು ಕನ್ನಡ ಸಾಹಿತ್ಯದಲ್ಲಿ ಎಲ್ಲಿಯೂ ಪ್ರಯೋಗಗೊಂಡಿಲ್ಲ. ದಿ|| ಎಂ. ವಿ. ಸೀತಾರಾಮಯ್ಯನವರು - 'ಸೊಗಸಾದ ಕುಣಿತದ ನಡೆಯ ಈ ವೃತ್ತ ಪ್ರಕಾರದ ಸುಳಿವು ನಮ್ಮ ಕಾವ್ಯರಾಶಿಯಲ್ಲಿ ಎಲ್ಲಿಯೂ ಸಿಕ್ಕದಿರುವುದು ಆಶ್ಚರ್ಯಕರ'ವೆಂದು (ಕನ್ನಡ ಛಂದಸ್ಸಿನ ಚರಿತ್ರೆ - ಸಂಪುಟ 2, ಪುಟ 250) ಹೇಳಿದ್ದುಂಟು. ಕುಣಿತದ ನಡೆಯ ಬಂಧಗಳು ಯಕ್ಷಗಾನಗಳಲ್ಲಿ ದೊರೆಯದೆ ಬೇರೆಲ್ಲಿ ದೊರೆಯಲು ಸಾಧ್ಯ?!



# ಪಂಪ ಕುಮಾರವ್ಯಾಸರಲ್ಲಿ ಬರುವ "ವಿದುರಧನುರ್ಭಂಗ"ಕ್ಕೆ ಆಕರವೇನು?

- ಡಾ|| ನ. ಸುಬ್ರಹ್ಮಣ್ಯಂ

ವ್ಯಾಸ ಮಹಾಭಾರತದಲ್ಲಿ ದುರ್ಯೋಧನನು ದುಷ್ಟನಾದರೂ ಉದ್ಧಟನಲ್ಲ. ಸಂಧಾನಕ್ಕೆಂದು ಬಂದ ಕೃಷ್ಣನನ್ನು ಆದರಿಸಿ ಸಭೆಗೆ ತಾನೇ ಕರೆತರುತ್ತಾನೆ. ಧೃತರಾಷ್ಟ್ರನನ್ನು ಮುಂದಿಟ್ಟುಕೊಂಡು ಭೀಷ್ಮಾದಿಗಳು ಇದಿರೆದ್ದು ಗೌರವಿಸುತ್ತಾರೆ. ಸಂಧಾನ ಸಮಯದಲ್ಲಿಯೂ ದುರ್ಯೋಧನ ಅವನನ್ನು ಸ್ವೇಚ್ಛೆಯಾಗಿ ಹಳಿಯಲು ಹೋಗುವುದಿಲ್ಲ. ಶಕುನಿಯೊಡಗೂಡಿ ಕೃಷ್ಣನನ್ನು ಕಟ್ಟಿಹಾಕುವ ಸಂಚು ಮಾಡಿದನಾದರೂ ವೈಯಕ್ತಿಕವಾಗಿ ಅವನನ್ನು ದೂಷಿಸುವುದಿಲ್ಲ. ಸಂಧಾನ ಸಮಯದಲ್ಲಿ "ವಿದುರಧನುರ್ಭಂಗ"ದ ವಿಷಯವೂ ಬರುವುದಿಲ್ಲ.

ಪಂಪನಲ್ಲಿ ದುರ್ಯೋಧನನು ಕೃಷ್ಣನ ಬಗ್ಗೆ ಅನಾದರಣೆಯನ್ನೇ ಸೂಚಿಸುತ್ತಾನೆ. ವಿದುರನು ಬಂದು ಕೃಷ್ಣನ ಆಗಮನದ ಸಂದೇಶವನ್ನು ಮುಟ್ಟಿಸಿದಾಗ "**ನಾಳೆ ಕರೆದು ತಾ**" ಎನ್ನುತ್ತಾನೆ. ಮಾರನೆಯ ದಿನ ಕೃಷ್ಣನು ಬಂದು ಮೂರನೆಯ ಬಾಗಿಲಿನಲ್ಲಿ ಕಾದುನಿಂತಿದ್ದನಾದರೂ ಅವನನ್ನು ಸ್ವಾಗತಿಸಲು ದುರ್ಯೋಧನ ಎದ್ದುಹೋಗುವುದಿಲ್ಲ. ಕುಳಿತಲ್ಲಿಂದಲೇ "**ಬರವೇೞ್**" ಎನ್ನುತ್ತಾನೆ. ಕೃಷ್ಣನು ಒಳಕ್ಕೆ ಪ್ರವೇಶಿಸಿದ ಮೇಲೆ ಹೇಗೋ ಮೈಯುಲಿಸಿದಂತೆ ಮೇಲೆದ್ದು ಗೌರವಿಸಿ ಅವನನ್ನು ಕುಳ್ಳಿರಿಸುತ್ತಾನೆ. ಕೃಷ್ಣನು ನಿರ್ವ್ಯಾಜದಿಂದಲೇ ಸಂಧಿಯ ಪ್ರಸ್ತಾಪ ಮಾಡಿದರೂ ದುರ್ಯೋಧನನು ಸ್ವಯಂ ಕ್ರುದ್ಧನಾಗಿ ಕೃಷ್ಣನನ್ನೂ ಅವನು ಕೈಕೊಂಡ ಸಂಧಿಪ್ರಯತ್ನವನ್ನೂ ಹಳಿದು, "**ಬಂದ ಬಟ್ಟೆಯಿನೆ ಬಿಜಯಂಗೆಯ್ಯಿಂ**" ಎನ್ನುತ್ತಾನೆ. ಆಗ ಕೃಷ್ಣನೂ ಸಹಜವಾಗಿಯೇ ಕೆರಳಿ ಪಾಂಡವರ, ಅದರಲ್ಲೂ ಅರ್ಜುನನ ಪರಾಕ್ರಮಾತಿಶಯವನ್ನು ಹೊಗಳಿ ವೃಥಾ ಕೆಡದಿರುವಂತೆ ಎಚ್ಚರಿಸಿದ. ಅದಕ್ಕೆ ದುರ್ಯೋಧನ ಮತ್ತಷ್ಟು ಕೆರಳುತ್ತಾನೆ.

ಕೃಷ್ಣನು ತನ್ನ ಮನೆಗೆ ಬಂದು ರಾಜಾತಿಥ್ಯವನ್ನು ಸವಿಯದೆ ದಾಸೀಪುತ್ರನಾದ ವಿದುರನ ಮನೆಯಲ್ಲಿ ಉಂಡು ತನ್ನನ್ನು ಧಿಕ್ಕರಿಸಿದನೆಂದು ದುರ್ಯೋಧನನ ಹೃದಯದಲ್ಲಿ ಮೊದಲೇ ಹೊಗೆಯಾಡುತ್ತಿದ್ದ ಮತ್ಸರ ಧಗ್ಗನೆ ಉರಿದೆದ್ದು, ತಳಮಳಿಸಿ, ಕಣ್ಣಾಣದೆ "**ಎಟ್ಟೋಟ್ಟೋಗು ದೂತನಪ್ಪನ ಬೆಟ್ಟನ ನುಡಿಗೇಳ್ಪು ಮುಳಿಯಲಾಗದು. ನೀನುಂ ಮೆಟ್ಟಿಟ್ಟು ವಿದುರನೆಂಬೀ ತೊಟ್ಟುಟ್ಟಿಯ ಮನೆಯ ಕೂೞ್ ನುಡಿಯಿಸೆ ನುಡಿದಯ್**" ಎಂದ.

ವಿದುರನ ದೃಷ್ಟಿಯಲ್ಲಿ ಕೃಷ್ಣ '**ಅಂಬುಜೋದರ**'. ತನ್ನ ಅತಿಥಿ. ಸಂಧಾನಕಾರನಾಗಿ ಪಾಂಡವರ ದೂತನಾಗಿ ಬಂದವನು. ದೂತನನ್ನು ಧಿಕ್ಕರಿಸಬಾರದು. ಕೃಷ್ಣನಂತಹ ಮಹಾಪುರುಷನನ್ನು ತೆಗಳಬಹುದೇ? ತನ್ನ ಅತಿಥಿಯನ್ನು ತನ್ನೆದುರಿನಲ್ಲೇ

ನಿಂದಿಸಬಹುದೇ? ಅವನನ್ನು ನಿಂದಿಸುವ ನೆಪದಲ್ಲಿ ಚಿಕ್ಕಪ್ಪನಾದ ತನ್ನನ್ನು ತುಂಬಿದ ಸಭೆಯಲ್ಲಿ ಎಲ್ಲರೆದುರು '**ತೊಱ್ತುಟ್ಟಿ**' (ದಾಸೀಪುತ್ರ) ಎಂದು ಹಳಿದು, ತನ್ನ ಕುಲವನ್ನೂ ತೆಗಳಬಹುದೇ? ಸಹಜವಾಗಿಯೇ ಕೆರಳಿದ ವಿದುರ ತನ್ನ ಕೈಯಲ್ಲಿದ್ದ ಬಿಲ್ಲನ್ನು ಪ್ರದರ್ಶಿಸಿ, ವಿಚ್ಛಿದುರಮನನಾಗಿ "**ನಿನ್ನ ತೊಡೆಗಳನ್ ಉಡಿವೆಡೆಯೊಳ್ ಭೀಮಸೇನನ್, ಆನ್ ಆ ಪದದೊಳ್ ಪಿಡಿಯಲ್ಕೆಂದಿರ್ದೆನಿದಂ. ಪಿಡಿಯೆಂ ಪೋಗು**" ಎಂದು ಅದನ್ನು ಮುರಿದೆಸೆದ.

ಮಹಾಭಾರತ ರಚನೆಯಲ್ಲಿ ಕುಮಾರವ್ಯಾಸನಿಗೆ ತನ್ನದೇ ಆದ ದೃಷ್ಟಿಕೋನವಿದ್ದರೂ, ಕಥಾಸಂಗ್ರಹಣಕಾರ್ಯದಲ್ಲಿ ಹಾಗೂ ಕಥಾವಾಹಿನಿಯ ಸಂಯೋಜನೆಯಲ್ಲಿ ವ್ಯಕ್ತಾವ್ಯಕ್ತವಾಗಿ ಪಂಪನೇ ಮೇಲ್ಪಂಕ್ತಿ. ಕೃಷ್ಣಭಕ್ತಿಯನ್ನುಳಿದು ಬಹುಪಾಲು ಮಾರ್ಪಾಟುಗಳಿಗೆ ಪಂಪನೇ ಪ್ರೇರಕ ಹಾಗೂ "**ವಿದುರಧನುರ್ಭಂಗ**" ಪ್ರಸಂಗಕ್ಕೂ ಪಂಪನೇ ಪ್ರೇರಣೆಯಿತ್ತಿದ್ದಾನೆ. ಅವನು ಒಂದು ಮಾತಿನಲ್ಲಿ ಹೇಳಿದುದನ್ನು ಇವನು ಹತ್ತು ಮಾತುಗಳಲ್ಲಿ ಹೇಳಿಯಾನು.

ವಿದುರನ ಮನೆಗೆ ಅತಿಥಿಯಾಗಿ ಬಂದಿದ್ದ ಕೃಷ್ಣ ವಿದುರನಿಗೆ "**ಹೋಗು, ನೀನಾತಂಗೆ ಪಾಂಡವರಾಗಸಮುದಯ ಬಂದನೆಂಬುದನೀಗಳರುಹುವುದು**" ಎಂದು ಹೇಳಿಕಳಿಸಿದ. ವಿದುರ ಹೋಗಿ ಆ '**ಅಖಿಲಮೂರ್ಖರಮೌಳಿ**'ಯನ್ನು ಕಂಡು, "**ಅವಧರಿಸು ಸಿರಿಲೋಲ ಬಿಜಯಂಗೈಯಲವಸರವುಂಟೆ?**" ಎಂದು ಕೇಳಿದ. ಅದಕ್ಕೆ ದುರ್ಯೋಧನ "**ನಾಳೆ ಬರಹೇಳು, ಇನ್ನೇನಾಳಿಕಾರನ ಬರವು? ಹಗೆಗಳ ಪಾಲಿಸುವ ಭರ! ಸಂಧಿಕಾರ್ಯಕೆ ಬಾರದಿರನು**" ಎಂದ.

ಅನಂತರ ದುರ್ಯೋಧನ ಕೃಷ್ಣನಿಗೆ ತನ್ನ ವೈಭವವನ್ನು ಮೆರೆಯಲು ಸಭೆಯನ್ನು ರಚಿಸಿ, ಸಿಂಹಾಸನದ ಮೇಲೆ ಮಂಡಿಸಿ, "**ಬರಲಿ ಕರೆ ಕೈತವದ ಶಿಕ್ಷಾಗುರುವನು**" ಎಂದು ಕೃಷ್ಣನನ್ನು ಕರೆತರಲು ದೂತರನ್ನು ಅಟ್ಟಿದ.

ರಥದಲ್ಲಿ ಕುಳಿತು ಬಂದ ಕೃಷ್ಣನನ್ನು ಭೀಷ್ಮನೇ ಕೈನೀಡಿ ಇಳಿಸಿಕೊಂಡು ಸಭೆಯೊಳಕ್ಕೆ ಕರೆತರುತ್ತಾನೆ. "**ಬಹಳೋಲಗದ ಸಂಭ್ರಮದ ಸಿರಿ ತಲೆವಾಗುತಿದ್ದುದು ನೊಸಲಕೈಗಳಲಿ**'! ಆದರೆ ಕುಮತಿ ಕೌರವ ಮಾತ್ರ ಅಲಕ್ಷ್ಯದಿಂದ ಸಿಂಹಾಸನವನ್ನು ಬಿಟ್ಟೇಳಲೇ ಇಲ್ಲ. ಆಗ ಈ '**ಪೆಣಸುಸೇರದ ದೇವ**' ತನ್ನ ಉಂಗುಟದಿಂದ ನೆಲವನ್ನು ಒತ್ತಿದ. ಕೂಡಲೆ ಮಣಿಖಚಿತ ಕಾಂಚನಪೀಠದ ಗೋಣಸು ಮುರಿದು ದುರ್ಯೋಧನ ಕೃಷ್ಣನ ಪಾದಗಳ ಮೇಲೆ ಬಂದು ಕವಿದುಬಿದ್ದ! ಏನೂ ಅರಿಯದವನಂತೆ ಕೃಷ್ಣ "**ಧರಣಿಪತಿ, ಸಿಂಹಾಸನದ ಮೇಲಿರದೆ ಬಹರೇ, ನಾವು ಬಂದೇ ಹರಸುವೆವು, ತಪ್ಪಾವುದು?**" ಎಂದು ಅವನ ಹೃದಯವನ್ನು ಚುಚ್ಚಿ ಕೆರಳಿಸುತ್ತಾನೆ.

'**ಹಿತಮಿತ ಮೃದುವಚನ**'ನಾದ ಪಂಪ ಕೆಲವೇ ಮಾತುಗಳಲ್ಲಿ ಧ್ವನಿಸುವ ಅರ್ಥವನ್ನು ಕುಮಾರವ್ಯಾಸ ಹೆಚ್ಚು ವಾಚ್ಯವಾಗಿಯೇ ಹೇಳುತ್ತಾನೆ. ದುರ್ಯೋಧನನು ಕೃಷ್ಣನಿಗೆ "**ನೀವು ಬಿಜಯಂಗೈವಿರೆಂದು ಮಹಾವಿಳಾಸದೊಳಳವಡಿಸಿ ನಾನಾ ವಿಧದ**

**ಷಡುರಸವ ತರುಣಿಯರಿಂದ ಸವೆಸಿದೆನು. ದೇವ, ನಮ್ಮರಮನೆಗೆ ಬಾರದೆ ನೀವು ವಿದುರನ ಮನೆಯಲುಂಡಿರಿ. ಗೋವಳಿಗತನ ನಿಮ್ಮ ಮೈಸಿರಿ ತಪ್ಪದಾಯ್ತು! ಅವಿವೇಕಿ ತೊತ್ತಿನ ಮಗನ ಮನೆಯಲಿ ಹಸಿವ ನೂಕಿದಿರಿ! ನಿಮಗೇಕೆ ರಾಯರ ಠೀವಿ?"** ಎಂದ.

ಆ ತುಂಬಿದ ಸಭೆಯಲ್ಲಿ ದುರ್ಯೋಧನನು ದೇವಾದಿದೇವನಾದ ಮತ್ತು ತನ್ನ ಅತಿಥಿಯಾದ ಕೃಷ್ಣನನ್ನು ದನಕಾಯುವನೆಂದು ದೂಷಿಸಿ, ಅವನಿಗೆ ಚಿಕ್ಕಪ್ಪನೇ ಆದ ತನ್ನನ್ನು ತೊತ್ತಿನ ಮಗ ಎಂದು ಹಳಿದುದಕ್ಕೆ ಕ್ರುದ್ಧನಾಗಿ "**ದುರುಳ, ನೀನಾಡಿದ ನುಡಿಗೆ ಉತ್ತರವನೀಯಲದೇಕೆ? ನಿನ್ನಯ ವರಜನನಿಗೆ 'ಆದಿಯಲಿ ಗಂಡರದಾರು ಹೇಳು! ..... ಕಡು ಮುಳಿಸಿನಲಿ ಭೀಮ ನಿನ್ನಯ ತೊಡೆಗಳನು ಕಡಿವಾ ಸಮಯದಲಿ ತಡೆದು ನಿನ್ನನು ಕಾಯಬೇಕೆಂದುಳುಹಿದೆನು ಧನುವ. ಕೆಡೆನುಡಿಸಿಕೊಂಡಿನ್ನು ಕಾವೆನೇ?....**" ಎಂದು ತನ್ನ ಕೈಯಲ್ಲಿ ಹಿಡಿದೆದ್ದ ಧನುಸ್ಸನ್ನು ಮುರಿದುಹಾಕಿದ.

ಈ ಪ್ರಸಂಗ ಮೂಲಭಾರತದಲ್ಲಿಲ್ಲ. ಅನ್ಯಕಾವ್ಯವನ್ನು ಆಧರಿಸಿ ಕಾವ್ಯವನ್ನು ಬರೆಯಹೊರಟ ನಮ್ಮ ಕವಿಗಳು ಸಾಮಾನ್ಯವಾಗಿ ಅಲ್ಲಿರುವ ಪ್ರಸಂಗವನ್ನೇ ಹಿಗ್ಗಿಸಿ ಅಥವಾ ಕುಗ್ಗಿಸಿ, ಇಲ್ಲವೇ ತಮ್ಮ ಮೂಗಿನ ನೇರಕ್ಕೆ ಅಳವಡುವಂತೆ ಅಲ್ಪಸ್ವಲ್ಪ ತಿದ್ದಿತೀಡಿ ಬರೆಯುವರೇ ಹೊರತು ನಿರಾಧಾರವಾಗಿ ಪ್ರಸಂಗಗಳನ್ನೇ ಸೃಷ್ಟಿಸಹೋಗುವುದಿಲ್ಲ. ಬೇರೆಲ್ಲಿಂದಲಾದರೂ ಆಯಾ ಸನ್ನಿವೇಶಕ್ಕೆ ಹೊಂದುವ ಸಂಗತಿಯನ್ನು ತಂದು ಹಾಕಿಕೊಳ್ಳಬಹುದಷ್ಟೆ.

ಅರಳೀಮರದ ಬೇರುಗಳು ನೆಲದಲ್ಲಿ ಎಷ್ಟು ಆಳವಾಗಿ ಮತ್ತು ಎಷ್ಟು ವಿಶಾಲವಾಗಿ ಹರಡಿಕೊಂಡು ಎಲ್ಲೆಲ್ಲಿಂದ ಭೂಸಾರವನ್ನು ಸೆಳೆದುಕೊಂಡು ಬೆಳೆಯುತ್ತದೋ ಅದನ್ನು ಹೊರಗೆ ಕಾಣಲಾರೆವು. ಬೃಹದ್ಗಾತ್ರವಾಗಿ ಗಗನಚುಂಬಿಯಾಗಿ ಬೆಳೆದ ಭವ್ಯ ವೃಕ್ಷಮಾತ್ರ ನಮಗೆ ಗೋಚರ. ಅಂತೆಯೇ ಮಹಾಕವಿಯ ಪ್ರತಿಭೆಯೂ ಯಾವ ಯಾವ ಕಾವ್ಯದ ಆಳಕ್ಕಿಳಿದು ರಸವನ್ನು ಹೀರಿಕೊಂಡು ಪುಷ್ಟವಾಗಿ, ತನ್ನ ಕಾವ್ಯವನ್ನು ಕವಿ ಬೆಳೆಸಿದ್ದಾನೋ ಮೇಲುನೋಟಕ್ಕೆ ತಿಳಿಯುವುದಿಲ್ಲ. ಪ್ರಾಚೀನ ಕಾವ್ಯಾಭ್ಯಾಸಿಗಳಿಗೆ "ಈ ಭಾವ ಅಲ್ಲಿಯದು, ಆ ಭಾವ ಇಲ್ಲಿಯದು, ಇಂತಹ ಕಾವ್ಯದಿಂದ ಪ್ರೇರಿತವಾದುದು" ಎಂದು ಹೊಳೆಯುತ್ತದೆ. ಪಂಪನನ್ನು ಓದಿದ ವಿದ್ವಾಂಸರು, ಪಂಪನೂ ಸಹ ವಾಲ್ಮೀಕಿ, ಕಾಳಿದಾಸ, ಭಾಸ, ಭಾರವಿ, ಭವಭೂತಿ, ಭಟ್ಟನಾರಾಯಣ, ಬಾಣ, ಮಾಘ ಇತ್ಯಾದಿ ಕವಿಗಳ ಕಾವ್ಯಭಾಗಗಳಿಂದ ಪ್ರೇರಿತನಾಗಿದ್ದಾನೆಂಬುದನ್ನು ಗುರುತಿಸುತ್ತಾರೆ. ಆದರೆ ಈ '**ವಿದುರಧನುರ್ಭಂಗ**'ದ ಪ್ರಸಂಗಕ್ಕೆ ಪ್ರೇರಣೆ ಎಲ್ಲಿಂದ ಎಂದು ಕಂಡುಬಂದಿರಲಿಲ್ಲ. "**ಪಂಪಭಾರತ ದೀಪಿಕೆ**"ಯನ್ನು ಬರೆದ ಪ್ರಾಚಾರ್ಯ ಡಿ.ಎಲ್.ಎನ್.ರವರು ತಮ್ಮ ಕೃತಿಯಲ್ಲಿ ಈ ಪ್ರಸಂಗವನ್ನು ವ್ಯಾಖ್ಯಾನಿಸುವಾಗ "**ವಿದುರ ತನ್ನ ಬಿಲ್ಲನ್ನು ಮುರಿದ ದೃಶ್ಯ ವ್ಯಾಸಭಾರತದಲ್ಲಿಲ್ಲ, ಕುಮಾರವ್ಯಾಸ ಭಾರತದಲ್ಲಿದೆ, ಪಂಪನ ಮಾತುಗಳನ್ನೇ ಇಲ್ಲಿ ಕಾಣಬಹುದು**". (ಪಂ. ಭಾ. ದೀ. ಪುಟ 325) ಎಂದಷ್ಟೇ ಹೇಳಿದ್ದಾರೆ.

ಕುಮಾರವ್ಯಾಸನಿಗೇನೋ ಪಂಪನೇ ಪ್ರೇರಕನಿರಬೇಕೆಂದು ಊಹಿಸಲವಕಾಶವಿದೆ. ಆದರೆ ಪಂಪನಿಗೆ?

ಇತ್ತೀಚೆಗೆ ಸಂಸ್ಕೃತದ "ಶ್ರೀಮದ್ಭಾಗವತ ಮಹಾಪುರಾಣ"ವನ್ನು ಅವಲೋಕಿಸುವಾಗ ಪ್ರಸಂಗವಶಾತ್ **'ತೃತೀಯಸ್ಕಂಧ-ಪ್ರಥಮೋಧ್ಯಾಯ'**ದಲ್ಲಿ ಉದ್ಧವ ವಿದುರರ ಭೇಟಿಯ ಸಂದರ್ಭದಲ್ಲಿ ವಿದುರನ ಧನುಸ್ಸಿನ ಪ್ರಸಕ್ತಿ ಕಂಡುಬಂದಿತು. ಕತ್ತಲಲ್ಲಿ ಮಿಂಚು ಹೊಳೆದಂತಾದುದರ ಪರಿಣಾಮ ಪ್ರಕೃತ ಲೇಖನ. ಅಲ್ಲಿನ ಪ್ರಸಕ್ತಿಯ ವಿವರ ಹೀಗೆ :

ಶುಕಮಹರ್ಷಿ ಪರೀಕ್ಷಿತನಿಗೆ ಹೇಳುತ್ತಾನೆ : "ಲಾಕ್ಷಾಗೇಹ ದಾಹದ ಸಂದರ್ಭದಲ್ಲಾಗಲಿ, ಕಪಟದ್ಯೂತ ತದನಂತರದ ದ್ರೌಪದೀಮಾನಭಂಗದ ಪ್ರಸಂಗದಲ್ಲಾಗಲಿ ಪುತ್ರಮೋಹದಿಂದ ಕೂಡಿದ್ದ ಧೃತರಾಷ್ಟ್ರ ತನ್ನ ಮಕ್ಕಳನ್ನು ತಡೆಯಲಿಲ್ಲ. ಪಾಂಡವರನ್ನು ಕಾಡಿಗಟ್ಟಲು ಅವಕಾಶಕೊಟ್ಟ. ಅವರು ಹಿಂತಿರುಗಿ ಬಂದ ಮೇಲೂ, ಕೃಷ್ಣ ಸಂಧಾನದ ನಂತರವೂ ಪಾಂಡವರಿಗೆ ಸಲ್ಲಬೇಕಾದ ರಾಜ್ಯಭಾಗವನ್ನು ಕೊಡಿಸಲಿಲ್ಲ. ವಿದುರನನ್ನು ಕರೆಸಿಕೊಂಡು, ಅವನಿಂದ ವಿವೇಕದ ಮಾತುಗಳನ್ನು ಕೇಳಬಯಸುತ್ತಾನೆ. ಅದೇ **'ವಿದುರನೀತಿ'** ಎಂದೂ ಪ್ರಖ್ಯಾತವಾಗಿದೆ. ಆ ಸಂದರ್ಭದಲ್ಲಿ ವಿದುರನು ಧೃತರಾಷ್ಟ್ರನಿಗೆ ಹೇಳುತ್ತಾನೆ :-

*ಅಜಾತಶತ್ರೋಃ ಪ್ರತಿಯಚ್ಛದಾಯಂ ತಿತಿಕ್ಷತೋ ದುರ್ವಿಷಹಂ ತವಾಗಃ ।*
*ಸಹಾನುಜೋ ಯತ್ರ ವೃಕೋದರಾಹಿಃ ಶ್ವಸನ್ ರುಷಾ ಯತ್ತ್ವಮಲಂ ಬಿಭೇಷಿ ॥*

(ಮಹಾರಾಜ, ಅಜಾತಶತ್ರುವಾದ ಯುಧಿಷ್ಠಿರನಿಗೆ ರಾಜ್ಯದ ಪಾಲು ಕೊಟ್ಟು ಬಿಡಿ. ನೀವು ಕೊಟ್ಟ ಸಹಿಸಲಾರದ ಅಪರಾಧಗಳನ್ನೂ ಅವರು ಸಹಿಸಿಕೊಂಡಿದ್ದಾರೆ. ಭೀಮರೂಪದ ಕಾಳಸರ್ಪಕ್ಕೆ ನೀನೇ ಹೆದರುತ್ತೀಯೆ. ಅವನು ತಮ್ಮನ ಮೇಲೆ ಸೇಡುತೀರಿಸಿಕೊಳ್ಳಲು ಕ್ರೋಧದಿಂದ ಭುಸುಗುಡುತ್ತಿದ್ದಾನೆ.)

*ಸ ಏಷ ದೋಷಃ ಪುರುಷದ್ವಿಡಾಸ್ತೇ ಗೃಹಾನ್ ಪ್ರವಿಷ್ಟೋ ಯಮಪತ್ಯಮತ್ಯಾ ।*
*ಪುಷ್ಣಾಸಿ ಕೃಷ್ಣಾದ್ವಿಮುಖೋ ಗತಶ್ರೀಃ ತ್ಯಜಾಶ್ವಶೈವಂ ಕುಲಕೌಶಲಾಯ ॥*

(ಯಾರನ್ನು ನೀನು ಪುತ್ರನೆಂದು ಪಾಲಿಸುತ್ತಿದ್ದೀಯೋ ಆ ದುರ್ಯೋಧನನು ಮೂರ್ತಿವೆತ್ತ ದೋಷವಾಗಿ ನಿಮ್ಮ ಮನೆಯನ್ನು ಹೊಕ್ಕಿದ್ದಾನೆ. ಅವನು ಕೃಷ್ಣ ದ್ವೇಷಿಯಾದುದರಿಂದ ನೀವು ಶ್ರೀಹೀನರಾಗಿದ್ದೀರಿ. ನೀನು ಕುಲದ ಶ್ರೇಯಸ್ಸನ್ನು ಬಯಸುವೆಯಾದರೆ ಈ ದುಷ್ಟನನ್ನು ಕೂಡಲೇ ತ್ಯಜಿಸು).

*ಇತ್ಯೂಚುವಾಂಸ್ತತ್ರ ಸುಯೋಧನೇನ ಪ್ರವೃದ್ಧಕೋಪಸ್ಫುರಿತಾಧರೇಣ ।*
*ಅಸತ್ಕೃತಃ ಸಂಸ್ಪೃಹಣೀಯಶೀಲಃ ಕ್ಷತ್ತಾ ಸಕರ್ಣಾನುಜ ಸೌಬಲೇನ ॥*
*ಕ ಏನಮತ್ರೋಪಜುಹಾವ ಜಿಹ್ಮಂ ದಾಸ್ಯಾಃಸುತಂ ಯದ್ಬಲಿನೈವ ಪುಷ್ಟಃ ।*
*ತಸ್ಮಿನ್ ಪ್ರತೀಪಃ ಪರಕೃತ್ಯ ಆಸ್ತೇ ನಿರ್ವಾಸ್ಯತಾಮಾಶು ಪುರಾಚ್ಛ್ವಸಾನಃ ॥*

(ಹಾಗೆ ಸ್ಪೃಹಣೀಯಶೀಲನಾದ ವಿದುರನ ಮಾತು ಕೇಳುತ್ತಲೇ ಅಲ್ಲೇ ಇದ್ದ, ಕರ್ಣ, ದುಶ್ಶಾಸನ, ಶಕುನಿ ಸಮೇತನಾದ ದುರ್ಯೋಧನನು ಅತಿಶಯವಾದ ಕೋಪದಿಂದ ಸ್ಫುರಿಸುತ್ತಿದ್ದ ತುಟಿಗಳಿಂದ **"ಕುಟಿಲ ದಾಸೀಪುತ್ರನಾದ ಇವನನ್ನು ಯಾರು ಇಲ್ಲಿಗೆ ಕರೆದರು? ಯಾರ ಅನ್ನವನ್ನು ತಿಂದು ಬದುಕುತ್ತಿದ್ದಾನೋ ಅವರಿಗೇ ಪ್ರತಿಕೂಲನಾಗಿ ಶತ್ರುವಿನ ಕೆಲಸ ಮಾಡುತ್ತಿದ್ದಾನೆ. ಇವನನ್ನು ಈ ಕೂಡಲೇ ನಗರದಿಂದ ಹೊರಕ್ಕೆ ತಳ್ಳಿ"** ಎಂದ.)

*ಸ ಇತ್ಥಮತ್ಯುಲ್ಬಣಕರ್ಣಬಾಣೈಃ ಭ್ರಾತುಃಪುರೋ ಮರ್ಮಸು ತಾಡಿತೋಽಪಿ ।*
*ಸ್ವಯಂ ಧನುರ್ದ್ವಾರಿ ನಿಧಾಯ ಮಾಯಾಂ ಗತವ್ಯಥೋಽಯಾದುರು ಮಾನಯಾನಃ ॥*
*ಸ ನಿರ್ಗತಃ ಕೌರವಪುಣ್ಯಲಬ್ಧೋ ಗಜಾಹ್ವಯಾತ್ ತೀರ್ಥಪದಃ ಪದಾನಿ ।*

(ತನ್ನ ಅಣ್ಣನ ಎದುರಿಗೇ ತನ್ನ ಕಿವಿಗೆ ನಾಟಿದ ಬಾಣಗಳಂತಿದ್ದ ಮರ್ಮಾಹತ ಕಠೋರ ವಚನಗಳಿಂದ ನೊಂದರೂ ತಪ್ಪಾಗಿ ಎಣಿಸದೆ, ಭಗವಂತನ ಮಾಯೆ ಪ್ರಬಲವಾದುದು ಎಂದುಕೊಂಡು, **ತನ್ನ ಧನುಸ್ಸನ್ನು ಬಾಗಿಲಲ್ಲೇ ಇಟ್ಟು, ಹಸ್ತಿನಾಪುರವನ್ನು ಬಿಟ್ಟು ವಿದುರ ತೀರ್ಥಯಾತ್ರೆಗೆ** ಹೊರಟುಹೋದ.)

ಸಂಧಾನ ಮುರಿದುಬಿದ್ದು ಯುದ್ಧ ನಿಶ್ಚಯವಾದ ಮೇಲೆ ಆದ ಘಟನೆಯಿದು. ಸಂಧಾನ ನಡೆದಾಗ ವಿದುರನ ಪಾತ್ರವಿಲ್ಲ. ಅನಂತರ ಧೃತರಾಷ್ಟ್ರ ತಾನಾಗಿ ಅವನನ್ನು ಕರೆಸಿ ಸಲಹೆ ಬೇಡಿದಾಗ ಅವನು ತನ್ನ ಅಭಿಪ್ರಾಯವನ್ನು ಹೇಳಿದ್ದು. ತನಗೆ ಅಪಮಾನವಾಗುವಂತೆ ಮಾತನಾಡಿದುದರಿಂದ ಯುದ್ಧದಲ್ಲಿ ತಾನು ಭಾಗವಹಿಸಬಾರದೆಂದು ನಿಶ್ಚಯಿಸಿದವನಂತೆ ಶಸ್ತ್ರತ್ಯಾಗಮಾಡಿ, ಯುದ್ಧದಲ್ಲಿ ಯಾವ ಪಕ್ಷದಿಂದಲೂ ಒತ್ತಾಯ ಬಾರದಿರುವಂತೆ ಹಾಗೂ ನಿಷ್ಠುರವಾಗಿ ಬರಲು ಅವಕಾಶವಿಲ್ಲದಂತೆ ತೀರ್ಥಯಾತ್ರೆಗೆ ಹೊರಟುಹೋದ.

ಈ ಪ್ರಸಂಗಕ್ಕೆ ಒಂದು ಹದವಾದ ತಿರುವುಕೊಟ್ಟು ಪಂಪ ತನ್ನ ಕಾವ್ಯದಲ್ಲಿ ಬಳಸಿಕೊಂಡ. ಅದನ್ನೇ ಮತ್ತಷ್ಟು ವಿಸ್ತರಿಸಿ ಕುಮಾರವ್ಯಾಸ ತನ್ನದೇ ದಾರಿಯಲ್ಲಿ ವಿಸ್ತಿರಿಸಿಕೊಂಡ.



# ಕೆಲವು ಸ್ತೋತ್ರ ಹಾಗೂ ಶಾಪಾಶಯ ಪದ್ಯಗಳ ಆಕರಗಳು

- ಸೀತಾರಾಮ ಜಾಗೀರ್‌ದಾರ್

ಅಶೋಕ ಚಕ್ರವರ್ತಿಯ ಶಾಸನಗಳ ಅನಂತರ ಉಪಲಬ್ಧವಾಗಿರುವ ಭಾರತೀಯ ಶಾಸನಗಳಲ್ಲಿ - ಅವುಗಳ ನಮೂನೆಯಲ್ಲಿ - ವಿನ್ಯಾಸದಲ್ಲಿ (Form/Format) ಇನಿತು ವ್ಯತ್ಯಾಸಗೊಂಡುದು ಕಂಡುಬರುತ್ತದೆ. ಸಾಮಾನ್ಯವಾಗಿ ಯಾವುದೇ ಪಂಥದ (ವೈದಿಕ, ಜೈನ ಇಲ್ಲವೇ ಬೌದ್ಧ) ಶಾಸನದ ಆರಂಭದಲ್ಲಿ ದೇವತಾಸ್ತುತಿ ಹಾಗೂ ಅಂತ್ಯದಲ್ಲಿ ಇತ್ತ ದಾನದತ್ತಿಗಳನ್ನು ಕಿತ್ತಿಕೊಂಡರೆ - ರದ್ದುಪಡಿಸಿದರೆ - ಆಯಾ ಆಡಳಿತ ನಡೆಸುವ ವ್ಯಕ್ತಿಗಳು ಪಾಪಕ್ಕೆ ಪಕ್ಕಾಗುತ್ತಾರೆ ಎಂದು ಶಾಸನ ರಚನಾಕಾರರು ಶಾಸನದ ಕೊನೆಯ ಭಾಗದಲ್ಲಿ ಹೇಳಿದ್ದಾರೆ.

ಅ) ಬಟಾರಿಕುಲದೋನಾಳ್ವಕದಮ್ಬನ್ಕಳ್ದೋನ್ ಮಹಾಪಾತಕನ್[1]

ಆ) ಸ್ವಸ್ತಿ ಶ್ರೀಮತ್ ಪ್ರಿಥಿವೀವಲ್ಲಭ ಮಂಗಲೀಸನಾ ಕಲ್ಮನೆಗೆ ಇತ್ತೋದು ಲಂಜಿಗೇಸರಂ ದೇವರ್ಕ್ಕೆ ಪೂನಿಜುವ (ಪೂನೀಜುವ?)
ಮಾಲಕಾರನ್ಗೆ ಆರ್ದ್ಧವಿಸದಿ ಇತ್ತೋದಾನಟಿವೋನ್ ಪಞ್ಚಮಹಾಪಾತಕನ (ಕ್ಕುಂ) ಏಟಿನೆಯಾ ನರಕದಾ ಪುಟುಆ (ಕ್ಕುಂ)[2]

ಇ) ಸ್ವಸ್ತಿ ॥ ವಿಜಯಾದಿತ್ಯ ಸತ್ಯಾಶ್ರಯ ಶ್ರೀಪೃಥ್ವೀ ವಲ್ಲಭ ಮಹಾರಾಜಾಧಿರಾಜ ಪರಮೇಶ್ವರಭಟಾರರಾ
ಪ್ರಾಣವಲ್ಲಭೆ ವಿನಾಪೊಟಿಗಳೆನ್ಪೋರ್ ಸೂಳೆಯರ್ -
ಇವರಾ ಮುದುತಾಯ್ವಿರ್ ರೇವಮಂಚಳ್ಗಳವರಾ ಮಗಳ್ದಿರ್
ಕೂಚಿಪೊಟಿಗಳವರಾ ಮಗಳು ವಿನಾಪೊಟಿಗಳ್ -
ಇಲ್ಲಿಯೆ ಹಿರಣ್ಯಗರ್ಭಮಿಟ್ಟು ಎಲ್ಲಾ ದಾನಮಂಗೊಟ್ಟು
ದೇವನಾಪೀಠಮಾನ್ ಕಿಸುವಿನೆಕಟ್ಟೆ ಬೆಳ್ಳಿಯಾ
ಕೊಡೆಯಾನೇಱಿಸಿಯೆ ಮಂಗಲುಳ್ಳೆ ಅಷ್ಟಶತ ಕ್ಷೇತ್ರಂ
ಗೊಟ್ಟೋಳ್ ಇದಾನಳಿದೋನ್ ಪಂಚಮಹಾಪಾತಕನಕ್ಕುಂ[3]

ಪಾಪಕ್ಕೆ ಪಕ್ಕಾಗುತ್ತಾರೆ ಎಂಬ ಶಾಪಾಶಯದ ನುಡಿ, ಭಯದ ಪ್ರಸ್ತಾಪ, ಆರಂಭದಲ್ಲಿ ಸಣ್ಣ ಸಣ್ಣ ಸರಳ ವಾಕ್ಯಗಳಲ್ಲಿ ಇರುತ್ತಿತ್ತು. ಅಂತೆಯೇ ಆರಂಭದ ಸ್ತುತಿಯೂ ಅಥವಾ ಮಂಗಲವಾಚಕ ಸಂಗತಿಯೂ ಚಿಕ್ಕ ಚಿಕ್ಕದಾದ ಮಾತುಗಳಲ್ಲಿ ಇರುತ್ತಿತ್ತು.

---

1 ಹಲ್ಮಿಡಿಶಾಸನ - ಪುನರಾವಲೋಕನ
(a) ಮಾನವಿಕ ಕರ್ನಾಟಕ ಸಂ.18, ಸಂ. 1, ಪು. 61-65.
(b) Ep. Car. Vol. 9 (1990) ಪೀಠಿಕೆ ಇತ್ಯಾದಿ

2 (a) ಡಾ. ಶಾಲಿನಿ ರಘುನಾಥಭಟ್ಟ ಶಾಸನ ಪಾಠಗಳು
(b) ಡಾ. ಎಂ. ಚಿದಾನಂದಮೂರ್ತಿ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ', ಪು. 464 (1966)

3 ಶಾಸನ ಸಾಹಿತ್ಯ ಸಂಚಯ (ಸಂ. ಎ. ಎಂ. ಅಣ್ಣಿಗೇರಿ) ಪು-4.

ಆದರೆ ಮುಂದೆ ಅದು ಪದ್ಯಗಳಿಗೆ ಪದ್ಯಗುಂಫನಗಳಿಗೊ ಎಡೆಕೊಟ್ಟುದು ಕಂಡು ಬರುತ್ತದೆ. ಹೀಗೆ ಮಾಡುವಾಗ ಶಾಸನ ಕವಿಗಳು ಸ್ವತಃ ಪದ್ಯಗಳನ್ನು ರಚಿಸಿದರು ಮತ್ತೆ ಕೆಲವೊಮ್ಮೆ ಬೇರೆ ಕಾವ್ಯಗಳಿಂದ ತಾವು ಬರೆಯುತ್ತಿರುವ ಶಾಸನಗಳಲ್ಲಿ ಉದ್ಧರಿಸಿದರು. ಉದಾಹರಣೆಗೆ ಆರಂಭದಲ್ಲಿ 'ಸ್ವಸ್ತಿ' 'ಶ್ರೀ' 'ಸಿದ್ಧಂ 'ನಮಃ' ಹಾಗೂ 'ಓಂ ನಮಃ ಸಿದ್ಧೇಭ್ಯಃ' ಇತ್ಯಾದಿಗಳಲ್ಲಿ ಯಾವುದಾದರೊಂದನ್ನು ಬರೆಯಲಾಗುತ್ತಿತ್ತು. ಕದಂಬರ ಎಂದರೆ ಕ್ರಿ. ಶ. 2-3 ರಿಂದ ಮುಂದೆ ಚಿಕ್ಕ ಶಬ್ದಗಳೊಂದಿಗೆ ಪದ್ಯಗಳನ್ನು - ಸ್ತುತಿಗಳನ್ನು - ಸೇರಿಸುವ ರೂಢಿಯೂ ಬಂದಿತು. ಉದಾ :

I

1. ಸ್ವಸ್ತಿ (11) ಜಯತಿ ಭಗವಾನ್ ಜಿನೇನ್ದ್ರೋ । ಗುಣರುಂದ್ರಃ
   ಪ್ರತಿಹಿತ ಪರಮಕಾರುಣಿಕಃ (11) ತ್ರೈಲೋಕ್ಯಾಶ್ವಾಸಕಾರೀ
2. ದಯಾಪತಾಕೋಚ್ಚರಿತ ಯಸ್ಯ (11)[4]

ಇದೇ ಪದ್ಯ ಹಲಸಿಯ ಇನ್ನೂ ಮೂರು ಶಾಸನಗಳಲ್ಲಿ ಸ್ತುತಿಪದ್ಯವಾಗಿ (Invocatory) ಬಂದಿದೆ. ಇವು ಅನಂತರದವೆಂಬುದೂ ಗಮನಾರ್ಹ.[5]

II

1. ಸ್ವಸ್ತಿಶ್ರೀ ರವಿವರ್ಮ್ಮ(ರ್)
2. ನಾಡಾಳೆ ಮಲ್ಲಿಗೆ ಆ....
3. ಅರಸರಾ ಪೆರಿಯಾ ಅರಸಿ (ಯಾ)
4. ರ್ಕಟಿಗುಜ್ಜ್ಜನಿಯಾ ಪಡು (ಗಲ್)
5. ಇನ್ನಿದಾನಳಿವೋರ ಪ (ಙ್ಚಾಪಾ)
6. ದಗ ಸಂಯುತ್ತರ (ಪ್ಪೋರ್)

ಸಂಪಾದಕೀಯ ಅಧಿಕಾಂಶಗಳ ಸೇರಿಸುವದನ್ನು ಕೈಬಿಟ್ಟರೆ ಇದೊಂದು 'ಗೀತಿಯ' ವಿಪರೀತ ಅರ್ಥಾತ್ ಉದ್ಗೀತಿಯ ಶಾಸನವೆಂದು ತೋರುತ್ತದೆ. ಆಗ ಶಾಸನ ಪಾಠ ಹೀಗಿರುತ್ತದೆ :

---

4 ಮೃಗೇಶವರ್ಮನ 8ನೇ ವರ್ಷದ ಹಲಸಿ ತಾಮ್ರಶಾಸನ. ಇಲ್ಲಿನ ಪದ್ಯ 'ಆರ್ಯಾ' ಛಂದದಲ್ಲಿದೆ. ಜೈನರ ಕೃತಿಗಳಲ್ಲಿ ಆರ್ಯಾ ಛಂದೋಬಂದದ್ದೇ ರಾಜ್ಯ. ಉದಾಹರಣೆಗೆ ಕೊಂಡಕುಂದಾದಿ ಆಚಾರ್ಯರ ಕೃತಿಗಳನ್ನು - ಸಮಯಸಾರ, ಪಂಚಾಸ್ತಿಕಾಯ, ಮೂಲಾಚಾರ (ವಟ್ಟಕೇರ) ಭಗವತಿ ಆರಾಧನಾ ಇತ್ಯಾದಿಗಳನ್ನು ಪರಿಶೀಲಿಸಬಹುದು. ಇದೇ ಕಾರಣದಿಂದ ಅದರ ಅಂಗಭೇದವಾದ 'ಕಂದ' ಕನ್ನಡದಲ್ಲಿ ಹೆಚ್ಚು ಪ್ರಯೋಗಕ್ಕೆ ಬಂದಿತು.

5 Corpus of Kadamba Inscriptions (Dr. B. R. Gopal), Insp. No. 13, 18, 22 & 24 pp. 50, 63, 79, 92.

ಸ್ವಸ್ತಿಶ್ರೀ ರವಿವರ್ಮ್ಮ(ರ್) ನಾಡಾಳೆ
ಮಲ್ಲಿಗೆ ಆ ಅರಸರ ಪೆರಿಯ
ಅರಸಿಯ ರ್ಕ ಬಿಗುಜ್ಜ್ಜನಿಯಾ ಪಡು
ಇ(ನ್ನ) ಇದಾನ್ನಟಿ'ವೋರ್ ಪ
ಇ್ಚ(ಮಹಾಪಾ) ದಗ(.) ಸಂಮ್ಯುತ್ತರ್

ಇದೊಂದು ದೋಷಯುಕ್ತ ಸಮಾಧಿಲೇಖ (Epitaph) ಕವಿತೆ.[6]

ಕರ್ನಾಟಕದ ಅನೇಕ ವೈದಿಕ ಶಾಸನಗಳಲ್ಲಿ ವಿಶೇಷವಾಗಿ ಬಾಣಭಟ್ಟನ ಹರ್ಷಚರಿತದ ಪದ್ಯ - ಮಂಗಳಶ್ಲೋಕ ಶಾಸನಕಾರರಿಂದ ಮಾನಿತವಾಗಿದೆ. ಅದೆಂದರೆ:

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ
ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ ॥

ಆತನದೇ 'ಕಾದಂಬರೀ' ಕೃತಿಯ ಮಂಗಳಶ್ಲೋಕ -

ಜಯನ್ತಿ ಬಾಣಾಸುರಮೌಲಿ ಲಾಲಿತಾಃ
ದಶಾಸ್ಯಚೂಡಾಮಣಿ ಚಕ್ರಚುಮ್ಬಿನಃ
ಸುರಾಸುರಾಧೀಶ ಶಿಖಾನ್ತಶಾಯಿನೋ
ಭವಚ್ಛಿದಸ್ತ್ರ್ಯಮ್ಬಕಪಾದ ಪಾಂಸವಃ ॥

ರೇವಾ ತಾಮ್ರಪಟ ಶಾಸನದಲ್ಲಿ ಉದ್ಧರಿಸಲಾಗಿದೆ.

ಕಾಲಿದಾಸನ ರಘುವಂಶದ ಮಂಗಳಶ್ಲೋಕ ಹಾಗೂ 1-6ನೇ ಪದ್ಯವನ್ನು ಶಾಸನಗಳಲ್ಲಿ ಯಥಾವತ್ತಾಗಿ ಉದ್ಧರಿಸಲಾಗಿದೆ. ಅವೆಂದರೆ :

a) ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ
ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ॥

ಈ ಸ್ತುತಿಯು ಹಾಸನ ಜಿಲ್ಲೆಯ ಬೇಲೂರಿನ[7] ಹಾಗೂ ಕಲ್ಯಾಣ ಚಾಳುಕ್ಯ ಚಕ್ರವರ್ತಿ 6ನೇ ವಿಕ್ರಮಾದಿತ್ಯನ ಹೂಲಿಯ ಶಾಸನಗಳಲ್ಲಿ[8] ಬಂದಿದೆ.

b) ಯಥಾವಿಧಿಹುತಾಗ್ನೀನಾಂ ಯಥಾ ಕಾಮಾರ್ಚಿತಾರ್ಥಿನಾಮ್
ಯಥಾಪರಾಧ ದಂಡಾನಾಂ ಯಥಾಕಾಲ ಪ್ರಬೋಧಿನಾಮ್ ॥

---

6 ಆರ್ಯಾ ಛಂದಸ್ಸು ಖಂಡಪ್ರಾಸವಿಲ್ಲದೆ ಪ್ರಯೋಗಗೊಂಡದ್ದು ಶ್ರವಣಬೆಳ್ಗೊಳದ ಶಾಸನವೊಂದರಲ್ಲಿಯೂ ಕಂಡು ಬಂದಿದೆ.
- ಬಿ. ಆರ್. ಗೋಪಾಲರ ಪೂರ್ವೋಕ್ತ ಪುಸ್ತಕ ಪು. 106.

7 ಎಪಿ. ಕ. ಸಂ. 9 (1990) ಬೇ. 327, ಪು. 308.

8 ಎಪಿ. ಇಂ. ಸಂ. XVIII ಪು. 197.

ಬಾದಾಮಿಯ ಚಾಳುಕ್ಯರ ಶಾಸನಗಳಲ್ಲಿ ಬರುವ ಪ್ರಶಸ್ತಿ ಭಾಗದಲ್ಲಿ ಒಂದು ಶಾಸನದಲ್ಲಿ ಈ ಶ್ಲೋಕದ ಮೊದಲ ಪಂಕ್ತಿ ಪಾರಿವಾಳಗಳು ಪುಚ್ಛಕೇ ಹಿಂದೆ ಆನಿಕೊಂಡು ಬರುವಂತೆ ಆನಿಕೊಂಡು ಬಂದಿದೆ.[9]

ಕಲಚುರಿ ತ್ರೈಲೋಕ್ಯ ಮಲ್ಲನ ರೇವಾ ತಾಮ್ರಪಟದಲ್ಲಿ ಕುಲಶೇಖರರ ಮುಕುಂದಮಾಲಾ, ದಂಡಿಯ ಕಾವ್ಯಾದರ್ಶ ಕೃತಿಗಳಿಂದ ಸ್ತುತಿ ಪದ್ಯಗಳನ್ನು ಎತ್ತಿ ಬರೆಯಲಾಗಿದೆ :

a) ಜಯತು ಜಯತು ದೇವೋ ದೇವಕೀನನ್ದನೋಽಯಂ
ಜಯತು ಜಯತು ಕೃಷ್ಣೋ ವೃಷ್ಣಿವಂಶಪ್ರದೀಪಃ
ಜಯತು ಜಯತು ಮೇಘಶ್ಯಾಮಲಃಕೋಮಲಾಂಗೋ
ಜಯತು ಜಯತು ಪೃಥ್ವೀಭಾರನಾಶೋ ಮುಕುಂದಾಃ ॥

- ಮುಕುಂದಮಾಲಾ

b) ಚತುರ್ಮುಖ ಮುಖಾಮ್ಭೋಜ ವನಹಂಸವಧೂರ್ಮಮ
ಮಾನಸೇ ರಮತಾಂ ನಿತ್ಯಂ ಸರ್ವಶುಕ್ಲಾ ಸರಸ್ವತೀ ॥

- ಕಾವ್ಯಾದರ್ಶ I - 1.

ಮಾರ್ಕಂಡೇಯ ಪುರಾಣಾಂತರ್ಗತ ಬರುವ 'ದೇವೀಮಹಾತ್ಮ್ಯ' ಕೃತಿಯಲ್ಲಿನ ದೇವೀಸ್ತುತಿಃ.

ಸರ್ವಮಙ್ಗಲಮಾಙ್ಗಲೇ ಶಿವೇಸರ್ವಾರ್ಥಸಾಧಕೇ
ಶರಣ್ಯೇತ್ರ್ಯಮ್ಬಕೇ ಗೌರೀ ನಾರಾಯಣಿ ನಮೋಸ್ತುತೇ ।

ಇದು ದ್ರುಹ್ಲಣ ಕವಿಯು ರಚಿಸಿದ 'ಧಧಿಮತಿ ಮಾತಾ' ಶಾಸನದಲ್ಲಿ ಬಂದಿದೆ.[10]

ತಾಳ್ಳಪಾಕ ಅನ್ನಮಾಚಾರ್ಯರ ಜಯಂತಿ ಉತ್ಸವ ಸಂಚಿಕೆಯು[11] ಲೇಖನವೊಂದರಲ್ಲಿ ಬಿಲ್ವಮಂಗಲ ಕವಿಯದೆಂದು ದಾಖಲಿಸಿದ ಪದ್ಯ :

ಯಂಶ್ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ
ಬೌದ್ಧಾಬುದ್ಧ ಇತಿ ಪ್ರಮಾಣಪಟವಃ ಕರ್ತ್ತೇತಿ ನೈಯ್ಯಾಇಕಾಃ

---

9 ಮಂಗಲೀಶನ ಮಹಾಕೂಟ ಶಾಸನದ ಪ್ರಶಸ್ತಿ ಭಾಗ
ಓಂ ಸ್ವಸ್ತಿ ಮಾನವ್ಯಸಗೋತ್ರಾಣಾಮ್ ಹಾರಿತೀ ಪುತ್ರಾಣಾಂ ಅಪ್ರತಿಹತೋತ್ಸಾಹ ಬಲಮತಿ ಪ್ರತಾಪ ಧೈರ್ಯವೀರ್ಯಾಣಾಂ ಮಾತಾಪಿತೃ ಪಾದಾನುಧ್ಯಾತಾನಾಮ್ ಯಥಾವಿಧಿ ಹುತಾಗ್ನಿನಾಮ್ ಯಥಾಕಾಮಾರ್ಚಿತಾರ್ಥಿನಾಮ್..... SKH (Dr.SS) P. 36.

10 ಎಪಿ. ಇಂ. ಸಂ. XI ಪು. 299.

11 ತಿರುಪತಿ ದೇವಸ್ಥಾನದಿಂದ ಪ್ರಕಟಿತ (ತೆಲುಗು) ಸಂಚಿಕೆ ಬಿ. ರಜನಿಕಾಂತರಾವ್ ಅವರ ಲೇಖನ ಪು. 53.

ಅರ್ಹಶ್ಚೇತಿಹ ಜೈನ ಶಾಸನಮಿತಿ ಕರ್ಮೇತಿ ಮೀಮಾಂಸಕಾಃ
ಸೋಯಂವೋ ವಿಧದಾತು ವಾಂಛಿತಫಲಂ ಶ್ರೀಕೇಶವೇಶಸ್ಸ ॥

ಬೇಲೂರಿನ ಶಾಸನವೊಂದರಲ್ಲಿ ಯಥಾವತ್ತಾಗಿ ಬಂದಿದೆ.[12]

ಕ್ರಿ. ಶ. 1095 ಮಾರ್ಚ್ 14ರಂದು (ಶಾ ಶ. 1017, ಯುವ, ಚೈತ್ರ ಶು. 7, ಬುಧವಾರ) ಬರೆಯಲಾಗಿರುವ ಹಳೇಬೇಲೂರಿನ (ಕೇಶವ ದೇವಸ್ಥಾನ ಹಾಗೂ ಅಲ್ಲಿನ) ಶಾಸನ ಹೊಯ್ಸಳ ರಾಣಿ ಶಾಂತಲದೇವೀ ಮತ್ತು ವಿಷ್ಣುವರ್ಧನರಿಗೆ ಮಾದರಿಯಾಯಿತೆಂದು ತೋರುತ್ತದೆ. ಏಕೆಂದರೆ ಇಲ್ಲಿ ಬಂದ ಪದ್ಯವೇ ಅವರ ಬೇಲೂರಿನ ದೇವಾಲಯಕ್ಕೂ ಶಾಸನಕ್ಕೂ ಆಧಾರಸ್ಥಂಬವಾಗಿದೆ. ಆ ಪದ್ಯ :

ಶ್ರೀಮತ್ತ್ರೈಳೋಕ್ಯನಾಥಾಯ ಸರ್ವಕರ್ಮ ಸುಸಾಕ್ಷಿಣೇ
ಫಳದಾಯ ನಮೋನಿತ್ಯಂ ಕೇಶವಾಯ ಶಿವಾಯಚ ॥[13]

ಇಲ್ಲಿಂದ ಮುಂದೆ ಈ ಪದ್ಯ ಅನೇಕ ಶಾಸನಗಳಲ್ಲಿ ಆರಂಭದ ಸ್ತುತಿರೂಪದ ಪದ್ಯವಾಗಿ ಮೆರೆದಿದೆ.

ಅನೇಕ ಜೈನ ಶಾನಗಳಲ್ಲಿ ಆರಂಭದಲ್ಲಿ ಈ ಒಂದು ಸ್ತುತಿರೂಪದ - ಆದೇಶದ - ಪದ್ಯ ಬಂದಿರುತ್ತದೆ :

ಶ್ರೀಮತ್ಪರಮ ಗಂಭೀರ ಸ್ಯಾದ್ವಾದಾಮೋಘ ಲಾಂಛನಮ್
ಜೀಯಾತ್ ತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ ॥[14]

ಇದು ಕ್ರಿ. ಶ. 7ನೇ ಶತಮಾನದ ಉತ್ತರಾರ್ಧದಲ್ಲಿ ಇದ್ದ ಅಕಳಂಕಭಟ್ಟನ 'ಪ್ರಮಾಣಸಂಗ್ರಹ' ಕೃತಿಯದ್ದೆಂದು ಡಾ॥ ಆ. ನೆ. ಉಪಾಧ್ಯೆ ತೋರಿಸಿದ್ದಾರೆ.[15]

ಹಳೆಯಬೀಡಿನ ಬಳಿಯಿರುವ ಬಸ್ತಿಹಳ್ಳಿಯಲ್ಲಿಯ ಆದಿನಾಥ ಬಸದಿಯ ಗರ್ಭಾಂಕಣದ ಬಾಗಿಲುವಾಡದ ಮೇಲೆ ಇರುವ ಶಾಸನದಲ್ಲಿ ಆರಂಭದ ಎರಡು ಪದ್ಯಗಳು ಹೀಗಿವೆ :

1 ಶ್ರೀದೇವೇಂದ್ರನತ ಶ್ರೀಪಾದಂ ಶ್ರೀಪದವಿ ನಮ್ಮ ಭವ್ಯ ।
ಜನಂಗಳ್ಗಾದರದಿಂ ದಯೆ ಗೆಯ್ಗೆಸು
ಭೋದಯಮಂ ಮುಕ್ತಿವಲ್ಲಭಂ ಮಲ್ಲಿಜಿನಂ ॥

---

12 ಎಪಿ. ಕ. ಸಂ. 9 (1990) ಶಾ. ಸಂಖ್ಯೆ: 144. ಪು. 98.
13 ಪೂರ್ವೋಕ್ತ ಎಪಿ. ಕ. ಸಂಪುಟ - 1, ಪು. 526 (ಶಾ. ಸಂಖ್ಯೆ. ಸಕಲೇಶಪುರ-45)
14 S.I.I. Vol. XX, No. 13, P. 12 (875-876 A. D ?)
15 On the authorship of Mangala Verse in Inscriptions - New Indian Antiquary, II, P. III.

ಮುನಿಜನದೋದಿಸಿದೋಜೆಯಲನುವದಿಪುದಿದೊಂದೆ
ಕೊಣ್ಡಕುಂದಾನ್ವಯ ನನ್ದನವನ ಶುಕವೆಂದೆನಗಿತ
ನನುಗ್ರಹಂ ಗೆಯ್ಗೆ ಕರುಣದಿಮ್ಮುನಿನಿವಹಂ ॥

ಇವು ಚಾವುಂಡರಾಯನ 'ಚಾವುಂಡರಾಯ ಪುರಾಣ' ಹಾಗೂ ಪಂಪನ ಆದಿಪುರಾಣದವೆಂದು ಕ್ರಮವಾಗಿ ಸೀತಾರಾಮ ಜಾಗೀರ್‌ದಾರ್ ಹಾಗೂ ಡಾ॥ ಎಂ. ಎಂ. ಕಲ್ಬುರ್ಗಿ ಅವರಿಂದ ಈಗಾಗಲೇ ಗುರುತಿಸಲ್ಪಟ್ಟಿವೆ.

ಜಯತ್ಯಾವಿಷ್ಕೃತಂ ವಿಷ್ಣೋರ್ವ್ವಾರಾಹಂ ಕ್ಷೋಭಿತಾರ್ಣ್ನವಂ
ದಕ್ಷಿಣೋನ್ನತ ದಂಷ್ಟಾಗ್ರ ವಿಶ್ರಾಂತಭುವನಂ ವಪುಃ ॥

ಇದು ಸುಮಾರು ಕ್ರಿ. ಶ. 7ನೇ ಶತಮಾನದ ಶಾಸನವೊಂದರಲ್ಲಿ[16] ಸದ್ಯ ಉಪಲಬ್ಧವಾದುದು ಕಂಡುಬರುತ್ತದೆ. ಅಲ್ಲಿಂದ ಮುಂದೆ ಅನೇಕ ಶಾಸನಗಳಲ್ಲಿ ಆರಂಭದ ಸ್ತುತಿ ಪದ್ಯಗಳಲ್ಲಿ ಒಂದಾಗಿದೆ. ಅಚ್ಚರಿಯೆಂದರೆ ಇದು ಜೈನಧರ್ಮಕ್ಕೆ ದತ್ತಿನೀಡಿದ ವಿಷಯವನ್ನುಳ್ಳ ಶಾಸನಗಳ ಆರಂಭದಲ್ಲಿ ಬಂದಿದೆ. ಪ್ರಾಯಃ ಬಾದಾಮಿ ಚಾಳುಕ್ಯರ ಆರಾಧ್ಯ ದೇವತೆ ಎಂದು ಹೀಗಾಗಿರಬಹುದು. ಅವರು ವರಾಹ ಲಾಂಛನರು ಎಂಬ ಸಂಗತಿಯನ್ನು ಇಲ್ಲಿ ಗಮನಕ್ಕೆ ತಂದುಕೊಳ್ಳಬೇಕು. ಕರ್ನಾಟಕದ ನೂರಾರು ಶಾಸನಗಳಲ್ಲಿ ಶಾಸನ ಕವಿಗಳು ಇದನ್ನು ಉದ್ಧರಿಸಿದ್ದಾರೆ. ವಿಷ್ಣು ಸ್ತುತಿಗಳಲ್ಲಿ ಇದೊಂದು ಬಹಳ ಪ್ರಸಾರವನ್ನು ಪಡೆದ ಪ್ರಖ್ಯಾತ ಸ್ತುತಿಯಾಗಿದೆ. ಡಾ॥ ಎಂ. ಚಿದಾನಂದಮೂರ್ತಿಗಳು "ಬಹುಪ್ರಸಿದ್ಧವಾದ ಈ ಶ್ಲೋಕವು ಕ್ರಿ. ಶ. 708ರ ರಾಯಗಡ ತಾಮ್ರಪಟಗಳಲ್ಲಿ ದೊರಕುತ್ತದೆ. ಕನ್ನಡ ಶಾಸನಗಳಲ್ಲಿ ಕ್ರಿ. ಶ. 930ರ ಕಳಸ ಶಾಸನದಲ್ಲಿ ಗೋಚರಿಸುತ್ತದೆ" ಎಂದು ಮುಂತಾಗಿ ಬರೆದುದು ಅಷ್ಟು ಸಮಂಜಸವಲ್ಲ[17]ವೆಂದು ನನಗೆ ತೋರುತ್ತದೆ.

ಎಫ್. ಇ. ಪರ್ಗಿಟೆರ್[18], ಪಿ. ವಿ. ಕಾಣೆ[19] ಹಾಗೂ ಡಿ. ಬಿ. ದಿಸ್ಕಲ್ಕರ್[20] ಮೊದಲಾದವರು ಪದ್ಮಪುರಾಣ, ಭವಿಷ್ಯಪುರಾಣ, ಬ್ರಹ್ಮಪುರಾಣ, ವಿಷ್ಣುಧರ್ಮೋತ್ತರಪುರಾಣ, ವಶಿಷ್ಠಸ್ಮೃತಿ ಹಾಗೂ ಬೃಹಸ್ಪತಿಸ್ಮೃತಿ ಗ್ರಂಥಗಳಲ್ಲಿ ಬಂದಿರುವ ಸಂಗತಿಯನ್ನು ಈಗಾಗಲೇ ಗುರುತಿಸಿಕೊಟ್ಟಿರುವುದನ್ನು ಕನ್ನಡದಲ್ಲಿ ಡಾ॥ ಎಂ. ಚಿದಾನಂದಮೂರ್ತಿಗಳು[21] ಒಂದೆಡೆ ತಂದು ತಿಳಿಸಿದ್ದಾರೆ.

---

16 S. I. I. Vol. XX No. 4 ವಿನಯಾದಿತ್ಯನ ಕ್ರಿ. ಶ. 683ರಲ್ಲಿ ಬರೆಯಲ್ಪಟ್ಟಿರುವ ಲಕ್ಷ್ಮೇಶ್ವರದ ಶಾಸನ. ಅನಂತರ ಇದೇ ಶಾಸನ ಸಂಪುಟದ ಶಾ. ಸಂಖ್ಯೆ - 5, 6 ಹಾಗೂ 7 ಇತ್ಯಾದಿಗಳನ್ನೂ ನೋಡಬಹುದು.

17 ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. 48.

18 "Verses relating to gifts of Land cited in Indian Land Grants" JRAS.1912, pp. 248-254.

19 History of Dharma Sastra, II. ii, pp. 1271-7.

20 Journal of Indian History, xxxviii, part iii, p. 552.

21 ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಆ. 1, 1966) ಪು. 54-56.

ಬಹುಭಿರ್ವಸುಧಾ ಭುಕ್ತಾ ರಾಜಭಿಸ್ಸಗರಾದಿಭಿಃ
ಯಸ್ಯಯಸ್ಯ ಯದಾಭೂಮಿಸ್ತಸ್ಯತಸ್ಯ ತದಾಫಲಂ ।।

ಇದು ಪದ್ಮಪುರಾಣ ಹಾಗೂ ಭವಿಷ್ಯ ಪುರಾಣದಲ್ಲಿ ಬಂದಿದೆ.

ಸ್ವದತ್ತಾಂ ಪರದತ್ತಾಂ ವಾಯೋ ಹರೇತ ವಸುಂಧರಾಂ
ಷಷ್ಟಿರ್ವರ್ಷ ಸಹಸ್ರಾಣಿ ಘೋರೇತಮಸಿ ದಚ್ಯತೇ ।।

ಇದು ಪದ್ಮಪುರಾಣ, ಭವಿಷ್ಯಪುರಾಣ ಹಾಗೂ ಬ್ರಹ್ಮಪುರಾಣಗಳಲ್ಲಿ ಬಂದಿದೆ.

ಭೂಮಿದಾನಾತ್ಪರಂ ದಾನಂ ನಭೂತರ್ನಭವಿಷ್ಯತಿ
ತಸ್ಯೈವ ಹರಣಾತ್ ಪಾಪಂ ನಭೂತರ್ನ ಭವಿಷ್ಯತಿ ।।

ಇದು ವಿಷ್ಣುಧರ್ಮೋತ್ತರ ಪುರಾಣದಲ್ಲಿ ಬಂದಿದೆ.

ಈ ವಿಷ್ಣುಧರ್ಮೋತ್ತರ ಪುರಾಣ ಹಾಗೂ ಪದ್ಮಪುರಾಣ ಗ್ರಂಥಗಳಲ್ಲಿ ಕೆಳಗಣ ಪದ್ಯವು ಕಾಣದೊರೆಯುತ್ತದೆ.

ಷಷ್ಟಿರ್ವರ್ಷ ಸಹಸ್ರಾಣಿ ಸ್ವರ್ಗೇಮೋದತಿ ಭೂಮಿದಃ
ಆಚ್ಛೇತ್ತಾ ಚಾನುಮಂತಾಚ ತಾನ್ಯೇವ ನರಕೇವಶೇತ್ ।।

ವಶಿಷ್ಠ ಸ್ಮೃತಿ, ಬೃಹಸ್ಪತಿ ಸ್ಮೃತಿ ಹಾಗೂ ಪದ್ಮಪುರಾಣಗಳಲ್ಲಿ ಈ ಕೆಳಗಿನ ಪದ್ಯವು ಕಾಣದೊರೆಯುತ್ತದೆ.

ದೇವಸ್ವಂ ವಿಷಮಿತ್ಯಾಹು ಬ್ರಹ್ಮಸ್ವಂ ವಿಷಮುಚ್ಯತೇ
ವಿಷಮೇಕಾಕಿನಂಹಂತಿ ಬ್ರಹ್ಮಸ್ವಂ ಪುತ್ರ ಪೌತ್ರಿಕಂ ।।

ಬೃಹಸ್ಮತಿ ಸ್ಮೃತಿ ಹಾಗೂ ಪದ್ಮಪುರಾಣಗಳಲ್ಲಿ ಕೆಳಗಿನ ಪದ್ಯಗಳೂ ಕಾಣ ದೊರೆಯುತ್ತವೆ :

ಅನ್ಯಾಯೇನ ಹೃತೋ ಭೂಮಿಃ ಅನ್ಯಾಯೇನ ತುಹಾರಿತೋ
ಹರತೋ ಹಾರಯತಶ್ಚ ಹನತ್ಯಾ ಸಪ್ತಮಂಕುಲಂ ।।
ಭೂಮಿಂ ಯಃ ಪ್ರತಿಗೃಹ್ಣಾತಿ ಯಶ್ಚ ಭೂಮಿಂ ಪ್ರಯಚ್ಛತಿ
ಉಭೌತೌಪುಣ್ಯ ಕರ್ಮಾಣಾನಿಯತೌ ಸ್ವರ್ಗವಾಸಿನೌ ।।
ವಿಂಧ್ಯಾಟವೀಷ್ವ ತೋಯೇಷು ಶುಷ್ಕಕೋಟರ ವಾಸಿನಃ
ಕೃಷ್ಣಸರ್ಪಾಹಿಜಾಯಂತೇ ಯೇ ಹರನ್ತಿ ವಸುಂಧರಾಃ ।।

ಇಲ್ಲಿನ ಕೊನೆಯ ಪದ್ಯ ಭವಿಷ್ಯ ಪುರಾಣ ಗ್ರಂಥದಲ್ಲಿ ಕೂಡ ದೊರೆಯುತ್ತದೆ.[22]

---

22 ಡಾ।। ಎಂ. ಚಿದಾನಂದಮೂರ್ತಿಗಳ "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಗ್ರಂಥದಲ್ಲಿ ಈ ಎಲ್ಲ ಪದ್ಯಗಳ ಬಗೆಗೆ ಮೇಲ್ಕಾಣಿಸಿದ ಹಾಗೆ ವಿವರಣೆಗಳು ಉಪಲಬ್ಧವಿವೆ. - ಕ. ಶಾ. ಸಾಂಸ್ಕೃತಿಕ ಅಧ್ಯಯನ, ಪು. 54-56.

ಇದುವರೆಗಿನ ಅಧ್ಯಯನದಲ್ಲಿ ವಿದ್ವಾಂಸರ ಗಮನಕ್ಕೆ ಬಾರದೆ ಇರುವ ಕೆಲವು ಸಂಗತಿಗಳನ್ನು ಇನ್ನು ಮುಂದೆ ದಾಖಲಿಸಲಾಗುವುದು. 'ಶ್ರೀಮದ್ಭಾಗವತ' ಹಾಗೂ 'ಮಹಾಭಾರತ' ಗ್ರಂಥಗಳಲ್ಲಿ ಶಾಪಾಶಯ ಇತ್ಯಾದಿ ವಿಚಾರಗಳ ಬಗ್ಗೆ ಕೆಳಗಿನ ಸಂಗತಿಗಳು ದೊರೆಯುತ್ತವೆ.

'ಒಂದು ದಿನ ಸಾಂಬ, ಪ್ರದ್ಯುಮ್ನ, ಚಾರು, ಭಾನು ಮತ್ತು ಗದ ಮೊದಲಾದವರು - ಯಾದವ ಬಾಲಕರು - ಆಟವಾಡಲು ಊರಿನ ಪಕ್ಕದ ಉದ್ಯಾನಕ್ಕೆ ಹೋದರು. ಬಹಳ ಹೊತ್ತು ಆಟವಾಡಿದ ನಂತರ ಬಾಯಾರಿಕೆಯಾಗಲು ನೀರನ್ನು ಹುಡುಕುತ್ತ ಹುಡುಕುತ್ತ ಒಂದು ಹಾಳು ಬಾವಿಗೆ ತಲುಪುತ್ತಾರೆ. ಆ ಬಾವಿಯಲ್ಲಿ ಅವರು ಒಂದು ಆಶ್ಚರ್ಯಕರವಾದ ದೊಡ್ಡದಾದ - ಬೆಟ್ಟದ ಭಾಸವನ್ನುಂಟುಮಾಡುವ - ಹೆಂಟೆಗೊದ್ದ (ಓತಿಕೇತ ಅಥವಾ ಓತಿಕಾಟ = Chameleon) ಪ್ರಾಣಿಯನ್ನು ನೋಡಿದರು; ಆ ಬಾವಿಯಿಂದ ಅದನ್ನು ಹೊರಕ್ಕೆ ತೆಗೆಯಲು ಪ್ರಯತ್ನಪಟ್ಟು ವಿಫಲರಾಗಿ ಶ್ರೀಕೃಷ್ಣನಿಗೆ ಅತ್ಯಂತ ಕುತೂಹಲಭಾವದಿಂದ ತಿಳಿಸಿದರು. ಜಗತ್ಪಾಲಕ ಭಗವಂತ ಶ್ರೀಕೃಷ್ಣ ಅಲ್ಲಿಗೆ ಬಂದು ನೋಡಿ ತನ್ನ ಎಡಗೈಯಿಂದಲೇ ಎತ್ತಿ ಹೊರಕ್ಕೆ ತೆಗೆದನು. ಆ ಕೃಕಲಾಸ ಕೃಷ್ಣನ ಕೈ ತಟ್ಟುತ್ತಲೇ - ಸ್ಪರ್ಶ ಉಂಟಾಗುತ್ತಲೇ - ತಕ್ಷಣ ಪುಟವಿಟ್ಟ ಚಿನ್ನದಂತೆ ಉತ್ತಮ ಸುಂದರ ಆಕಾರವನ್ನು ದೇವತಾರೂಪವನ್ನು ಪಡೆಯಿತು. ಆ ಅಚ್ಚರಿಯನ್ನು ಎಲ್ಲರಿಗೂ ತಿಳಿಸಲು ಶ್ರೀಕೃಷ್ಣನು "ನೀನು ಯಾರು ನಿನಗೆ ಈ ದಶೆ ಬರಲು ಏನು ಕಾರಣ?" ಎಂದು ಮುಂತಾಗಿ ವಿಚಾರಿಸಿದನು. ಆಗ ಆತ -

> ಕಿಂ ನು ತೇ ವಿಪಿತಂ ನಾಥ ಸರ್ವಭೂತಾತ್ಮಸಾಕ್ಷಿಣಃ[23]
> ಕಾಲೇನಾವ್ಯಾತಹ ದೃಶೋ ವಕ್ಷ್ಯೇಽಥಾಪಿ ತವಾಜ್ಞಯಾ ॥

ಶಾಪಮುಕ್ತನಾದ ಆ ನೃಗ ಮಹಾರಾಜನು ತಾನು ಇಕ್ಷ್ವಾಕು ಕುಲದ ಅರಸನೆಂದೂ ಅನೇಕ ಸಾಲಂಕೃತ ಉತ್ತಮಗೋವುಗಳನ್ನು ದಾನಮಾಡಿದುದಾಗಿ ತಿಳಿಸುತ್ತಾನೆ :

> ಪಯಸ್ವಿನೀಸ್ತರುಣೀಃ ಶೀಲರೂಪ
> ಗುಣೋಪಪನ್ನಾಃ ಕಪಿಲಾ ಹೇಮ ಶೃಂಗಾಃ ।
> ನ್ಯಾಯಾರ್ಜಿತಾ ರೂಪ್ಯಖುರಾಃ ಸವತ್ಸಾಃ
> ದುಕೂಲಮಾಲ್ಯಾ ಭರಣಾ ದದಾವಹಂ ॥[24]

---

23 "ಸರ್ವಕರ್ಮ ಸುಸಾಕ್ಷಿಣೇ" ಎಂಬ ಉಕ್ತಿಗಳಿಗೆ ಇಲ್ಲಿ ಆಕರವಿದೆ. - ಶ್ರೀಮದ್ಭಾಗವತ (ಸಂ. ನುಗ್ಗೇಹಳ್ಳಿ ವೇಂಕಟನಾಥಾಚಾರ್ಯ ಹಾಗೂ ಪಂಡಿತರತ್ನಂ ಕೊತ್ತಮಂಗಲ ವರದಾಚಾರ್ಯರು)
ಸ್ಕಂಧ - 10, ಅಧ್ಯಾಯ - 64, ಪದ್ಯ - 23, ಪು. 435.

24 ಆಕಳುಗಳನ್ನು ಅಲಂಕರಿಸಿ ದಾನಮಾಡುವ ಸಂಗತಿ ಅನೇಕ ಶಾಸನಗಳಲ್ಲಿ ಬಂದಿದೆ. ಅದಕ್ಕೆ ಆಕರ ಇಲ್ಲಿದೆ.

(ಹಾಲನ್ನು ಸಾಕಷ್ಟು ಹರಿಬಿಡುವ (ಪಯಸ್ವಿನೀ = ನದಿ) ಪ್ರಾಯದ, ಒಳ್ಳೆಯ ಸ್ವಭಾವದ, ರೂಪಗುಣಗಳಿಂದ, ಅಲಂಕೃತವಾದ ಚಿನ್ನದ ಆಣಸುಗಳನ್ನು ಕೊಂಬಿಗೆ ಅಳವಡಿಸಿದ, ಗೊರಸುಗಳಿಗೆ ಅಲಂಕೃತ ಬೆಳ್ಳಿಯ ತಗಡನ್ನು ಅಳವಡಿಸಿದ ಮತ್ತೆ ಕರುವಿನೊಂದಿಗೆ ಪಟ್ಟುವಸ್ತ್ರ ಭೂಷಣ ಹಾಗೂ ಪುಷ್ಪಮಾಲೆಗಳಿಂದ ಅಲಂಕೃತ ಹಸುಗಳನ್ನು ದಾನಮಾಡಿದೆನು.)

ಹೀಗಿರುವಾಗ ಒಮ್ಮೆ ಒಂದು ಹಸು ಬ್ರಾಹ್ಮಣ ಶ್ರೇಷ್ಠನೊಬ್ಬನಿಗೆ ದಾನ ಮಾಡಿದುದು ಅವನ ಮಂದೆಯಿಂದ ತಪ್ಪಿಸಿಕೊಂಡು ಮರಳಿ ಬಂದು ನೃಗಮಹಾರಾಜನ ಮಂದೆಯಲ್ಲಿ ಹಸುಗಳೊಂದಿಗೆ ಬೆರೆತು ಹೋಯಿತು. ಇದನ್ನು ತಿಳಿಯದೆ ತನ್ನ ಹಸು ಮಂದೆಯಲ್ಲಿ ಬೆರೆತ ಆ ಹಸುವನ್ನು ನೃಗಮಹಾರಾಜ ಇನ್ನೊಬ್ಬ ಬ್ರಾಹ್ಮಣನಿಗೆ ದಾನ ಮಾಡಿದನು. ಹೊಸದಾಗಿ ದಾನ ಪಡೆದ ಬ್ರಾಹ್ಮಣನು ಆ ಹಸುವನ್ನು ತನ್ನ ಮನೆಗೆ ಒಯ್ಯುತ್ತಿರುವಾಗ ಮೊದಲು ದಾನ ತೆಗೆದುಕೊಂಡ ಬ್ರಾಹ್ಮಣನು 'ಆ ಗೋವು ನನ್ನದು' 'ನೃಗರಾಜನು ನನಗೆ ಕೊಟ್ಟಿದ್ದನು' (ನೃಗೋಮೇ ದತ್ತವಾನಿತಿ) ಎಂದು ಮುಂತಾಗಿ ತಕರಾರು ತೆಗೆದನು. ಹೊಸದಾಗಿ ದಾನ ಪಡೆದ ವ್ಯಕ್ತಿಯೂ ಆ ಹಸು ತನ್ನದೆಂದು ವಾದಿಸಿ ಇಬ್ಬರೂ ಜಗಳ ಕಾದುತ್ತ ನೃಗ ಮಹಾರಾಜನಲ್ಲಿಗೆ ಬಂದರು. ತಿಳಿಯದೆ ಆದ ತಪ್ಪಿಗೆ ನೃಗರಾಜನು ಆ ಇಬ್ಬರಲ್ಲಿಯೂ ಅಪರಾಧವನ್ನು ಕ್ಷಮಿಸಬೇಕೆಂದು ಕೇಳಿಕೊಂಡನು. ಸ್ವಾರ್ಥಸಾಧಕರಾದ ಆ ಇಬ್ಬರೂ ವಾದವಿವಾದ ಪ್ರಸಂಗದಲ್ಲಿ ರಾಜನನ್ನು 'ನೀನೆ ದಾತ ಮತ್ತೆ ನೀನೆ ಅಪಹರ್ತ' ಎಂದು ಆರೋಪಿಸಿದರು :

> ವಿಪ್ರೌ ವಿವದಮಾನೌ ಮಾಮೂಚತುಃ ಸ್ವಾರ್ಥಸಾಧಕೌ
> ಭವಾನ್‌ದಾತಾಪಹರ್ತೇತಿ ತಚ್ಛ್ರುತ್ವಾ ಮೇಽಭವದ್ಭ್ರಮಃ ॥

ತಬ್ಬಿಬ್ಬಾದ ರಾಜನು ಆ ಹಸುವಿಗೆ ಪ್ರತಿಯಾಗಿ ಬೇರೆ ಹಸುವನ್ನು ಕೊಡುವುದಾಗಿ ಹೇಳಿದನು. ಬೇರೆ ಲಕ್ಷ ಹಸುಗಳನ್ನು ಕೊಡುತ್ತೇನೆಂದರೂ ಬೇಡವೆಂದು ಹೊಸದಾಗಿ ದಾನ ಪಡೆದ ವ್ಯಕ್ತಿ ಆ ಹಸುವನ್ನು ಹೊಡೆದುಕೊಂಡು ಹೋಗಿಬಿಟ್ಟನು. ಮೊದಲು ದಾನ ಪಡೆದ ವ್ಯಕ್ತಿಯು ಸಾವಿರ ಹಸುಕೊಟ್ಟರೂ - ಎಷ್ಟುಕೊಟ್ಟರೂ - 'ನನಗೆ ಬೇಡ' ಎಂದು ಹೊರಟುಹೋದನು.

ಇಷ್ಟರಲ್ಲೇ ಇತ್ತ ಯಮದೂತರು ಬಂದು "ನನ್ನನ್ನು ಯಮಪುರಿಗೆ ಕರೆದುಕೊಂಡು ಹೋದರು. ಯಮಧರ್ಮರಾಯನು ನನಗೆ ಪುಣ್ಯಫಲವನ್ನು ಮೊದಲು ಅನುಭೋಗಿಸುತ್ತೀಯ ಅಥವಾ ಪಾಪಫಲವನ್ನು ಅನುಭೋಗಿಸುತ್ತೀಯ ಎಂದು ಕೇಳಿದನು". ಆಗ "ನಾನು ಪಾಪಫಲವನ್ನು ಅನುಭೋಗಿಸುವೆ" ಎಂದು ಆತನಿಗೆ ಹೇಳಿದೆ. ಆತನು "ಹಾಗಾದರೆ ಕೆಳಗೆ ಬೀಳು" ಎಂದು ಆಜ್ಞಾಪಿಸಿದ; ಕೂಡಲೆ ನಾನು 'ಕೃಕಲಾಸ' ಆಗಿ ಕೆಳಗೆ ಬಿದ್ದೆಸ್ವಾಮಿ; ಮಿಕ್ಕನದೆಲ್ಲ ನಿನಗೇ ಗೊತ್ತಿದೆ. ಯೋಗಿಗಳಿಗೆ ಕಾಣುವ ನೀನು ವ್ಯಸನದಿಂದ ಕುರುಡನಾದ ನನಗೆ ಹೇಗೆ ಗೋಚರಿಸಿದೆ - ನನಗೆ ತಿಳಿಯದು! ದೇವ

ದೇವ, ಜಗನ್ನಾಥ, ಪುರುಷೋತ್ತಮ, ನಾರಾಯಣ, ಹೃಷಿಕೇಶ, ಪುಣ್ಯಶ್ಲೋಕ, ಅಚ್ಯುತ[25] ಅವ್ಯಯ, ನಾನು ಎಲ್ಲೇ ಇರಲಿ - ಹೇಗೇ ಇರಲಿ - ನನ್ನ ಮನಸ್ಸು ನಿನ್ನ ಪಾದಾರವಿಂದದಲ್ಲಿ ಇರುವಂತೆ ಮಾಡು, ಈಗ ದೇವಲೋಕಕ್ಕೆ ಹೋಗುವದಕ್ಕೆ ಅನುಮತಿ ನೀಡು" ಎಂದು ರಾಜನು ಕೃಷ್ಣನನ್ನು ಪ್ರಾರ್ಥಿಸಿದ ; ನಂತರ ವಿಮಾನವನ್ನು ಏರಿದ.

ದೇವಕಿಸುತ ಕೃಷ್ಣನು ಪರಿಜನರಿಗೆ - ಕ್ಷತ್ರಿಯ ಪುತ್ರರಿಗೆ - ಬುದ್ಧಿಯನ್ನು ಕಲಿಸುವುದಕ್ಕೆಂದು ಹೀಗೆ ಹೇಳಿದನು ;

ದುರ್ಜರಂ ಬತ! ಬ್ರಹ್ಮಸ್ವಂ ಭಕ್ತಮಗ್ನೇರ್ಮ ನಾಗಪಿ
ತೇಜೀಯಸೋಪಿ ಕಿಮುತ ರಾಜ್ಞಾಮೀಶ್ವರಮಾನಿನಾಂ ॥
ನಾಹಂ ಹಾಲಾಹಲಂ ಮನ್ಯೇವಿಷಂ ಯಸ್ಯ ಪ್ರತಿಕ್ರಿಯಾ
ಬ್ರಹ್ಮಸ್ವಂ ಹಿ ವಿಷಂ ಪ್ರೋಕ್ತಂ[26] ನಾಸ್ಯ ಪ್ರತಿನಿಧಿರ್ಭುವಿ ॥

(ಜೀರ್ಣಿಸಿಕೊಳ್ಳುವುದು ಕಷ್ಟ! ಅಗ್ನಿಗಿಂತ ತೇಜಸ್ವಿಯಾಗಿದ್ದರೂ ಬ್ರಾಹ್ಮಣ ಸ್ವತ್ತು ಸ್ವಲ್ಪವೇ ಆಗಿದ್ದರೂ ಅದನ್ನು ಸ್ವಾರ್ಥಕ್ಕೆ ಬಳಸಬಾರದು. ನಾನು ಹಾಲಾಹಲವನ್ನು 'ವಿಷ' ಎಂದು ಮನ್ನಿಸುವುದಿಲ್ಲ ; ಆದರೆ ಬ್ರಹ್ಮಸ್ವವೇ ವಿಷವೆಂದು ತಿಳಿದಿದ್ದೇನೆ. ವಿಷಕ್ಕೆ ಪ್ರತಿಕ್ರಿಯೆ ಉಂಟು. ಆದರೆ ಬ್ರಹ್ಮಸ್ವಕ್ಕೆ ಪ್ರತಿಔಷಧವೇ ಇಲ್ಲ! ಮನುಷ್ಯರಾದ ರಾಜರಿಗೆ ತಾನೇ ಲೋಕೇಶ್ವರರೆಂದು ಬೀಗುವವರಿಗೆ ಏನೆಂದು ಹೇಳುವುದು?)

ಹಿನಸ್ತಿ ವಿಷಮತ್ತಾರಂ ವಹ್ನಿರದ್ಭಿಃ ಪ್ರಶಾಮ್ಯತಿ
ಕುಲಂ ಸಮೂಲಂ ದಹತಿ ಬ್ರಹ್ಮಸ್ವಾರಣಿಪಾವಕಃ ॥

(ವಿಷ, ಅದನ್ನು ತಿನ್ನುವವನನ್ನು ಮಾತ್ರ ಕೊಲ್ಲುತ್ತದೆ; ಬೆಂಕಿಯು ನೀರಿನಿಂದ ಶಮನವಾಗುತ್ತದೆ; ಆದರೆ ಬ್ರಾಹ್ಮಣಸ್ವತ್ತೆಂಬ ಆರಣಿಯಿಂದ ಜನಿಸಿದ ಬೆಂಕಿಯು ಅಪಹರಿಸಿದವನ ಕುಲವನ್ನು ಸಮೂಲವಾಗಿ ಸುಟ್ಟು ಹಾಕುತ್ತದೆ.) ವಿಷವು ಕಷ್ಟದಾಯಕ ಬ್ರಹ್ಮಸ್ವವು ವಿಷಕ್ಕಿಂತ ಕಷ್ಟದಾಯಕ ಎಂಬುದು ಸುಸ್ಪಷ್ಟ; ಇಲ್ಲಿ,

ಬ್ರಹ್ಮಸ್ವಂ ದುರನುಜ್ಞಾತಂ ಭುಕ್ತಂ ಹಂತಿ ತ್ರಿಪೂರುಷಂ
ಪ್ರಸಹ್ಯತು ಬಲಾದ್ಭುಕ್ತಂ ದಶಪೂರ್ವಾನ್ ದಶಾಪರಾನ್ ॥

(ಬ್ರಹ್ಮಸ್ವವನ್ನು ಒಪ್ಪಿಗೆ ಪಡೆಯದೆ ಉಪಭೋಗಿಸಿದರೆ ಅದು ಮೂರು ತಲೆಮಾರನ್ನು ಕೊಲ್ಲುತ್ತದೆ; ಇನ್ನು ಬಲಾತ್ಕಾರದಿಂದ ಕಿತ್ತು ತಿಂದರೆ ಅದು ಹಿಂದಿನ ಹತ್ತು ತಲೆಗಳನ್ನೂ ಮತ್ತು ಮುಂದಿನ ಹತ್ತು ತಲೆಗಳನ್ನೂ ಕೊಲ್ಲುತ್ತದೆ.) ಅರ್ಥಾತ್ ಒಂದು ಜೀವ ಇಪ್ಪತ್ತೊಂದು ತಲೆಮಾರಿನವರೆಗೆ ಜನನ ಮರಣಗಳ ನೋವನ್ನು ಅನುಭೋಗಿಸಬೇಕಾಗುತ್ತದೆ.

---

25 ಚ್ಯುತಿ ಇಲ್ಲದವನು, ಜಾರದವನು ಪರಮಾತ್ಮ - ಅಚ್ಯುತ. ಜಾರುವವನು ಆತ್ಮ.

26 "ಬ್ರಹ್ಮಸ್ವಂ ವಿಷಂ ಪ್ರೋಕ್ತಂ" ಎಂಬ ವಾಕ್ಯವನ್ನು ಗಮನಿಸಿ.

ರಾಜಾನೋ ರಾಜ್ಯಲಕ್ಷ್ಮ್ಯಂಧಾ ನಾತ್ಮಪಾತಂ ವಿಚಕ್ಷತೇ
ನಿರಯಂ ಯೇಽಭಿಮನ್ಯಂತೇ ಬ್ರಹ್ಮಸ್ವಂ ಸಾಧು ಬಾಲಿಶಾಃ ॥

(ಐಶ್ವರ್ಯಲಕ್ಷ್ಮಿಯ ಮದದಿಂದ ರಾಜರಾದವರು ಕುರುಡರಾಗುತ್ತಾರೆ; ತಾವೇ ಬೀಳುವುದನ್ನು ಕಾಣಲಾರರು - ಯೋಚಿಸಲಾರರು! ಬ್ರಾಹ್ಮಣ ಸ್ವತ್ತು (ಬ್ರಹ್ಮಸ್ವಂ) ತಮ್ಮದೆಂದು ಅನುಭೋಗಿಸುವವರು ಬಾಲಿಶಬುದ್ಧಿಯವರು, ಅವರು ನರಕವನ್ನೇ ಅನುಭೋಗಿಸುವ ಮೂರ್ಖರು) ಐಶ್ವರ್ಯದ ಮದದಲ್ಲಿ ರಾಜರು ಬ್ರಹ್ಮಸ್ವವನ್ನು ಭೋಗಿಸಿ ನರಕಕ್ಕೆ ದಾರಿಯನ್ನು ಮಾಡಿಕೊಳ್ಳುವ ಮೂರ್ಖರಾಗುತ್ತಾರೆ. ಮತ್ತೆ

ಗೃಹ್ಣಂತಿ ಯಾವತಃ ಪಾಂಸೂನ್ ಕ್ರಂದತಾಮಶ್ರುಬಿಂದವಃ
ವಿಪ್ರಾಣಾಂ ಹತವೃತ್ತೀನಾಂ ವದಾನ್ಯಾನಾಂ ಕುಟುಂಬಿನಾಂ ॥
ರಾಜಾನೋ ರಾಜಕುಲ್ಯಾಶ್ಚ ತಾವತೋಽಬ್ದಾನ್ನಿರಂಕುಶಾಃ
ಕುಂಭಿಪಾಕೇಷು ಪಚ್ಯಂತೇ ಬ್ರಹ್ಮದಾಯಾಪಹಾರಿಣಃ ॥

(ಉದಾರ ಹೃದಯಿಗಳಾದ, ಕುಟುಂಬಿಗಳಾದ ಬ್ರಾಹ್ಮಣರು ಜೀವನಕ್ಕೆ ಆಧಾರವಾದ ವೃತ್ತಿಗಳನ್ನು ಕಳೆದುಕೊಂಡು ಕಣ್ಣೀರಿನ ಹನಿಗಳನ್ನು ಉದುರಿಸಿದರೆ ಅದಕ್ಕೆ ಕಾರಣರಾದ ರಾಜರೂ, ರಾಜ ಕುಲದವರೂ ಆ ಕಂಬನಿಯನ್ನುಂಡ ನೆಲದ ಮಣ್ಣಿನ ಕಣಗಳಷ್ಟು ವರ್ಷ ಕುಂಭಿಪಾಕವೆಂಬ[27] ನರಕದಲ್ಲಿ ಬಿದ್ದು ನರಳುತ್ತಾರೆ.)

ಸ್ವದತ್ತಾಂ ಪರದತ್ತಾಂ ವಾ ಬ್ರಹ್ಮವೃತ್ತಿಂ ಹರೇಚ್ಚಯಃ
ಷಷ್ಟಿರ್ವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ॥

(ಯಾವನೊಬ್ಬ ವ್ಯಕ್ತಿ ತಾನು ಕೊಟ್ಟ ಇಲ್ಲವೆ ಇನ್ನೊಬ್ಬರು ಕೊಟ್ಟ ಬ್ರಹ್ಮವೃತ್ತಿ (ಬ್ರಾಹ್ಮಣರ ವೃತ್ತಿ = ಜೀವಿಕೆಯ ಆಧಾರ) ಭೂಮಿಯನ್ನು ಅಪಹರಿಸುವನೋ ಅವನು ಅರವತ್ತು ಸಾವಿರ ವರ್ಷಗಳ ಕಾಲ ಅಮೇಧ್ಯದಲ್ಲಿ (ಹೇಲಿನಲ್ಲಿ) ಹುಳುವಾಗಿ ಹುಟ್ಟುವನು.) ಈ ಶಾಪಾಶಯ ಪದ್ಯ ವೈದಿಕ, ಜೈನ ಮುಂತಾಗಿ ಯಾವುದೇ ಜಾತಿಯ ಶಾಸನವಿರಲಿ ಅದರಲ್ಲಿ ಮುನ್ನೆಚ್ಚರಿಕೆಯ ಪದ್ಯವಾಗಿ ಬಂದಿದೆ, ನೋಡಿ :

ಅ) ಕದಂಬ ದೊರೆ ಮೃಗೇಶವರ್ಮನ ಮೂರನೆಯ ವರ್ಷದ ದೇವಗಿರಿ ತಾಮ್ರ ಶಾಸನ. ಇದು ಜೈನ ಅರ್ಹಂತರ ಪೂಜೆಗೆಂದು ಕೊಟ್ಟ ದಾನದತ್ತಿಯನ್ನು ದಾಖಲಿಸಿದೆ.[28] ಇನ್ನೂ ಕೆಲವು ಶಾಪಾಶಯಗಳೊಂದಿಗೆ ಈ ಪದ್ಯ ಬಂದಿದೆ; ಕಿಂಚಿತ್ ಪಾಠಭೇದವನ್ನೂ ಹೊಂದಿದೆ :

ಪಂಕ್ತಿ : 16 ................ ಸ್ವದತ್ತಾಂ ಪರದತ್ತಾಂ ವಾ
17 ಯೋ ಹರೇತ ವಸುನ್ಧರಾ [1A] ಷಷ್ಟಿಂ
ವರ್ಷ ಸಹಸ್ರಾಣಿ ನರಕೇಪಚ್ಯತೇತುಸಃ ॥

---

27 "ಏಳನೆಯಾ ನರಕದಾ ಪುಟು ಅಕುಂ" ಇತ್ಯಾದಿಗಳನ್ನು ನೆನಸಿಕೊಳ್ಳಬೇಕು. ನರಕದ ಕಲ್ಪನೆಗಳು ಪುರಾಣದಷ್ಟು ಪ್ರಾಚೀನ.

28 Corpus of Kadamba Inscriptions (Dr. B. R. Gopal) p. 31, about 458 A.D.

ಇದೇ ರಾಜನ ಆಳ್ವಿಕೆಯ 8ನೇ ವರ್ಷದಲ್ಲಿ ಹೊರಡಿಸಿದ ಹಲಸಿ ತಾಮ್ರ ಪಟ್ಟಿಕೆಯಲ್ಲಿ ಹೀಗಿದೆ :

ಪಂಕ್ತಿ : 15 ..............ಸ್ವದತ್ತಾ ಪರದತ್ತಾ ವಾಮ್ ಯೋ
ಹರೇತವಸು
16 ನ್ಧರಾಮ್ ಷಷ್ಟಿ ವರ್ಷ ಸಹಸ್ರಾಣಿ ಕುಮ್ಭೀ ಪಾಕೇ ಸಪಚ್ಯತೇ।। [29]

ಆ) ರಾಣೆಬೆನ್ನೂರು ತಾಲೂಕಿನ ಹಿರಿಬಿದರಿಯಲ್ಲಿ ದೊರೆತ ಶಿಲಾಶಾಸನ; ಬಾದಾಮಿಯ ಚಾಳುಕ್ಯ ದೊರೆ ಸತ್ಯಾಶ್ರಯನ (ಇಮ್ಮಡಿ ಪುಲಿಕೇಶಿ) ಕಾಲದಲ್ಲಿ ಬರೆಯಲಾಗಿದೆ :

1. ಸ್ವಸ್ತಿ ಶ್ರೀ ಸತ್ಯಾಶ್ರಯ
2. (ನಾ)ಳೆ ಪೃಥಿವಿಯಾನ್
3. (ಗು)ಪ್ಪರ ವಂಶೋತ್ತಮನ್
4. (ಮಾ)ರಾಕೋನ ಕೊಟ್ಟುದು ಕ್ಷೇತ್ರ
5. ಇರ್ಪ್ಪತ್ತ (ಯ್ರು)ತ್ತರ್
6. ಸ್ವದತ್ತಾಂ ಪರದತ್ತಾಂ ವಾ ಯೋಹ
7. ರೇತಿ ವಸುನ್ಧರಾ (ಮ್) ಷ
8. ಷ್ಟಿಮ್ಬರಿಷ ಸಹಸ್ರಾ
9. ಣಿ ವಿಷ್ಟಾಯಾ (೦) ಜಾಯತೇ
10. ಕ್ರಿಮಿ (ಃ।।)[30]

ಇಲ್ಲಿನ ಶಾಪಾಶಯದ ಪದ್ಯದ ಎರಡನೇ ಪಂಕ್ತಿಯು ಶ್ರೀಮದ್ಭಾಗವತದಲ್ಲಿ ಇದ್ದಂತೆಯೇ ಇದೆ. ಕನ್ನಡ ಶಾಸನಗಳಲ್ಲಿ ಸದ್ಯ ಇದೇ ಮೊದಲ ಉಪಲಬ್ಧ ದಾಖಲೆ. ಕದಂಬರ ಕಾಲದ ಹಾಗೂ ಈ ಪ್ರಯೋಗಗಳನ್ನು ಅವುಗಳಲ್ಲಿ ಭಾಷಾ ಮಾರ್ಪಾಟುಗಳನ್ನು (ವರ್ಷ>ವರಿಷ>ಬರಿಷ)ವ>ಬ ಆದುದನ್ನು ನೋಡಿದರೆ ಈ ಪದ್ಯ ಬಹಳ ಹಿಂದೆಯೆ ಬಹಳ ಬಹಳ ಹಿಂದೆಯೇ ತನ್ನ ಶುದ್ಧರೂಪವನ್ನು ಕಳೆದುಕೊಂಡಿದೆ. ಇಲ್ಲವೇ ಕವಿಗಳಲ್ಲಿ ಮಾರ್ಪಾಟುಗೊಂಡಿದೆ. ಆಕರದ ಬಗೆಗೆ ಇದಮಿತ್ಥಂ ಎಂದು ಹೇಳುವಂತಿಲ್ಲ. ಪುರಾಣಗಳು ಅಶೋಕನ ಶಾಸನಗಳ ಕಾಲಕ್ಕಿಂತಲೂ ಮುಂಚೆಯೆ ಎಂದರೆ ಕ್ರಿ.ಪೂ. 272-232ಕ್ಕೂ ಮುಂಚೆಯೆ ಬರೆಯಲ್ಪಟ್ಟಿವೆ. (ಏದಾ ಪೊರಾಣಾ ಪಂಕಿತಿಯಾ.... ಇತ್ಯಾದಿ) ಭಾಗವತ ಪುರಾಣವೂ ಅವುಗಳಲ್ಲೊಂದು ಇದನ್ನು ನಾವು ಮರೆಯುವಂತಿಲ್ಲ.

---

29 ibid. About 463 A.D. (455+ 8 = 463) p.51.

30. S.I.I. Vol. xx (Dr. G. S. Gai) No. 2, p. 2 ಈ ಕನ್ನಡ ಶಾಸನ ಸುಮಾರು ಕ್ರಿ.ಶ. 6-7ನೆಯ ಶತಮಾನದಲ್ಲಿ ಬರೆಯಲ್ಪಟ್ಟದ್ದು (B.K. No. 101 of 1935-36) ಡಾ।। ಎಂ. ಚಿದಾನಂದಮೂರ್ತಿಗಳ ಕಣ್ಣಿಗೆ ಬೀಳದೆ ಇದ್ದದ್ದು ಆಶ್ಚರ್ಯ.

Vyasa narrated the Samhita of the Mahabharata to his five pupils Sumanta, Jaimini, Paila, Suka and Vaisampayana and each of them published his own samhita separately :

ವೇದಾನಧ್ಯಾಪಯಾಮಾಸ ಮಹಾಭಾರತ ಪಞ್ಚಮಾನ್
ಸುಮನ್ತುಂ ಜೈಮಿನಿಂ ಪೈಲಂ ಶುಕಂಚೈವ ಸ್ವಮಾತ್ಮಜಂ ॥
ಪ್ರಭುರ್ವರಿಷ್ಠೋ ವರದೋ ವೈಶಂಪಾಯನಮೇವಚ
ಸಂಹಿತಾಸ್ತೈಃ ಪೃಥಕ್ತ್ವೇನ ಭಾರತಸ್ಯ ಪ್ರಕಾಶಿತಃ ॥

**-MBh. I, 57. 74-75.**

'ಮಹಾಭಾರತ' ಸಂಹಿತೆಯನ್ನು ವ್ಯಾಸರು ತಮ್ಮ ಐದು ಮಂದಿ ಶಿಷ್ಯರಿಗೆ ಪಾಠ ಮಾಡಿದರು. ಸುಮನ್ತು, ಜೈಮಿನಿ, ಪೈಲ, ಅವರ ಪುತ್ರ ಶುಕ ಹಾಗೂ ಶ್ರೇಷ್ಠನಾದ ವೈಶಂಪಾಯನರೆಂಬ ಆ ಐವರು ಶಿಷ್ಯರು ತಮ್ಮ ತಮ್ಮ ಸಂಹಿತೆಗಳನ್ನು (ಕೃತಿಗಳನ್ನು) ಬೇರೆ ಬೇರೆಯಾಗಿಯೆ ಪ್ರಕಾಶಿಸಿದರು.[31]

ಈಗ ಉಪಲಬ್ಧವಿರುವ 'ಮಹಾಭಾರತ' ಕೃತಿಯು ವೈಶಂಪಾಯನರದು. ಜೈಮಿನಿಯ ಕೃತಿಯ ಕೆಲವು ಭಾಗಗಳನ್ನು ಬಿಟ್ಟರೆ ಮಿಕ್ಕವರ ಸಂಹಿತೆಗಳು ಇದುವರೆಗೆ ಇನ್ನೂ ದೊರಕಿಲ್ಲ. ಶ್ರೀಮದ್ಭಾಗವತವು ಭಾರತದ ಕಥೆಯನ್ನೂ ಒಳಗೊಂಡಿರುವುದು ಸ್ಪಷ್ಟವಿರುವುದರಿಂದ ಶುಕ ಆ 'ಭಾರತ' ಸಂಹಿತೆ ಇದೇ ಆಗಿರಬಹುದೇ?[32]

ಶ್ರೀಮದ್ಭಾಗವತವು ಜನತೆಯ ಮೇಲೆ ತನ್ನ ಪ್ರಭಾವವನ್ನು ಬೀರಿದ ಹಾಗೆ ಮಹಾಭಾರತವೂ ತನ್ನ ಪ್ರಭಾವವನ್ನು ಬೀರಿದೆ. ಶಕುಂತಲೋಪಾಖ್ಯಾನದ ಪದ್ಯ-

ಆದಿತ್ಯ ಚನ್ದ್ರಾವನಿಲಾನಲೌಚ
ದ್ಯೌರ್ಭೂಮಿರಾಪೋಹೃದಯಂ ಯಮಶ್ಚ
ಅಹಶ್ಚ ರಾತ್ರಿಶ್ಚ ಉಭೇಚ ಸಂಧ್ಯೇ
ಧರ್ಮಶ್ಚ ಜಾನಾತಿ ನರಧ್ಯ ವೃತ್ತಮ್ ॥[33]

ಇದು ದುರ್ಗಸಿಂಹನ 'ಪಂಚತಂತ್ರ' (ಕ್ರಿ.ಶ. 1031)[34] ಕೃತಿಯ ಅನಂತರ ಕನ್ನಡ ಹಾಗೂ ಕರ್ನಾಟಕದ ಹಲವಾರು ಶಾಸನಗಳಲ್ಲಿ ಬಂದಿದೆ.[35] ಸಂಸ್ಕೃತ ಪಂಚತಂತ್ರದಲ್ಲಿ ಎರಡು ಸಲ ಪ್ರಯೋಗಗೊಂಡಿದೆ.[36]

---

31 Dr. P. L. Vaidya "Harivam'sa" Pt. I, Int. pp. XLIV - XLV

32 ಈ ವಿಷಯದಲ್ಲಿ ಇನ್ನೂ ಸಂಶೋಧನೆ ಆಗಬೇಕು.

33 Dr. V. S. Sukthankar " The Adipurvan" Pt. i, 68-29 (1933)

34 ದುರ್ಗಸಿಂಹನ "ಪಂಚತಂತ್ರ" (ಸಂ. ಎನ್. ಅನಂತರಂಗಾಚಾರ್)

35 ಎ.ಪಿ.ಕ. ಸಂಪುಟ-9 (1990), ಶಾ. ಸ. ಬೇ-180, ಪು-127.

36 ಪಂಚತಂತ್ರಂ (ಸಂ. : ಎಂ. ಆರ್. ಕಾಳೆ) ಪು. 34, 86 (ಪ್ರಕಾಶಕರು : ಮೋತಿಲಾಲ್ ಬನಾರಸಿದಾಸ್) ಸಂಸ್ಕೃತ ಹಿತೋಪದೇಶದಲ್ಲೂ ಉದ್ಧೃತಗೊಂಡಿದೆ.

ಕರ್ನಾಟಕದ ಅನೇಕ ಶಾಸನಗಳಲ್ಲಿ ಅದರಲ್ಲಿಯೂ ವೀರಗಲ್ಲುಗಳಲ್ಲಿ ಕೆಳಗಿನ ಪದ್ಯ ವಿಶೇಷವಾಗಿ ಕಾಣಿಸಿಕೊಂಡಿದೆ.

ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿಸುರಾಂಗನಾ
ಕ್ಷಣವಿಧ್ವಂಸಿನೀ ಕಾಯೇ ಕಾ ಚಿಂತಾ ಮರಣೇರಣೇ ॥[37]

ಭಾರತದಲ್ಲಿ ಜನರಲ್ಲಿ ಯೋಧನಾದವನು ಯುದ್ಧಕ್ಕೆ ಹೆದರಬಾರದು, ಯುದ್ಧಭೂಮಿಯಿಂದ ಓಡಿಹೋಗಬಾರದು (ಹೆದರಿ ಪಲಾಯನ ಮಾಡಬಾರದು); ಯುದ್ಧದಲ್ಲಿ ಗೆದ್ದರೆ ಇಹದಲ್ಲಿ ಸುಖ, ಮಡಿದರೆ ಪರಲೋಕ ಅರ್ಥಾತ್ ಸ್ವರ್ಗದಲ್ಲಿ ಸುಖ; ಮುಂತಾಗಿ ಒಂದು ನಂಬಿಗೆ-ಸಂಪ್ರದಾಯ-ಮಹಾಭಾರತದ ಕಾಲದಿಂದಲೂ ಅಸ್ತಿತ್ವದಲ್ಲಿ ಇರುವುದು ಕಂಡುಬರುತ್ತದೆ. ವಿರಾಟ ಪರ್ವದಲ್ಲಿ ಎರಡು ಸಂದರ್ಭದಲ್ಲಿ ಕೆಳಗಿನ ಪದ್ಯಗಳು ಬಂದಿವೆ. ಮೊದಲನೆಯದು ಉತ್ತರನು ರಣರಂಗದಲ್ಲಿ ಕೌರವರ ಸೇನಾಸಮುದ್ರವನ್ನು ನೋಡಿ ಯುದ್ಧಭೂಮಿಯಿಂದ ಪಲಾಯನ ಮಾಡಲು ಎಳಸಿ ರಥದಿಂದ ಧುಮ್ಮಿಕ್ಕಿ ಹೊರಟದ್ದು; ಎರಡನೆಯ ಸಂದರ್ಭ ಉತ್ತರನು ಅರ್ಜುನನ (ಪ್ರಚ್ಛನ್ನ ದೇವಮಾನವನ) ಬಲಪ್ರದರ್ಶನವನ್ನು ತನ್ನ ತಂದೆ ವಿರಾಟನಿಗೆ ತಿಳಿಸುತ್ತಿರುವುದು :

(ಅ) **ಬೃಹನ್ನಡೋವಾಚ :**

ನೈಷಪೂರ್ವೈಃಸ್ಮೃತೋಧರ್ಮಃ ಕ್ಷತ್ರಿಯಸ್ಯ ಪಲಾಯನಮ್
ಶ್ರೇಯಸ್ತೇ ಮರಣಂ ಯುದ್ಧೇ ಭೀತಸ್ಸ ಪಲಾಯನಮ್ ॥ (೩೬-೨೬)

(ಕ್ಷತ್ರಿಯರಿಗೆ ಪಲಾಯನ ಮಾಡುವುದು ಯುದ್ಧ ಭೂಮಿಯಲ್ಲಿ ಪೂರ್ವದಲ್ಲಿ ಸ್ಮೃತಿಗಳು ನಿರ್ಧರಿಸಿದ ಧರ್ಮವಲ್ಲ; ಯುದ್ಧದಲ್ಲಿ ಮರಣವನ್ನಪ್ಪುವುದೇ ಧರ್ಮ - ಶ್ರೇಯಸ್ಕರ.)[38]

(ಆ) **ಉತ್ತರ ಉವಾಚ :**

ನಮೋಕ್ಷ್ಯಸೇ ಪಲಾಯಂಸ್ತ್ವಂ ರಾಜನ್ಯುದ್ಧೇ ಮನಃ ಕುರು
ಪೃಥಿವೀಂ ಭೋಕ್ಷ್ಯಸೇ ಜಿತ್ವಾ ಹತೋವಾ ಸ್ವರ್ಗಮಾಪ್ಯ ಸಿ ॥ (೬೪-೨೫)

('ದುರ್ಯೋಧನ') ದೊರೆಯೆ ಓಡಿಹೋದರೆ ಮೋಕ್ಷವಿಲ್ಲ - ನೀನು ಓಡಿ ಹೋಗುವಂತಿಲ್ಲ! - ಯುದ್ಧಕ್ಕೆ ಮನಸ್ಸು ಮಾಡು; ಗೆದ್ದರೆ ಪೃಥ್ವಿಯನ್ನು ಅನುಭೋಗಿಸುವೆ, ಸತ್ತರೆ ಸ್ವರ್ಗವನ್ನು ಪಡೆಯುತ್ತೀಯೆ.)[39]

ಯುದ್ಧಕಾರ್ಯಕ್ಕೆ ವಿಮುಖನಾಗಿ ಗ್ಲಾನಿಯಲ್ಲಿ ತುಂಬಿ ತುಳುಕಿನಿಂತ ಅರ್ಜುನನಿಗೆ ಕೃಷ್ಣನು ತನ್ನ ಉಪದೇಶದಲ್ಲಿ ಹೀಗೆ ಹೇಳಿದ್ದಾನೆ :

---

37 B. K. Insp. Vol. XI (S.I.I.) No. 32, p. 19.
38 ವಿರಾಟ ಪರ್ವ (ಪ್ರಧಾನ ಸಂ. : ಸಿ.ಪಿ.ಕೆ.) ಪು. 182 (ಕ.ಅ.ಸಂ. ಮೈಸೂರು, 1990.)
39 ಅದೇ. ಪು. 222.

ಹತೋವಾ ಪ್ರಾಪ್ಯಸಿ ಸ್ವರ್ಗಂ ಜಿತ್ವಾವಾ ಭೋಕ್ಷ್ಯಸೇ ಮಹೀಮ್
ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ।।[40]

ವಿರಾಟ ಪರ್ವದ "ಪೃಥಿವೀ ಭೋಕ್ಷ್ಯಸೇ..... ಸ್ವರ್ಗ ಮಾಪ್ಯಸಿ" ಹಾಗೂ ಗೀತೆಯ "ಹತೋವಾಪ್ರಾಪ್ಯಸಿಸ್ವರ್ಗಂ ..... ಮಹೀಮ್" ಎಂಬ ಪಂಕ್ತಿಗಳ ಅರ್ಥದಲ್ಲಿ ಕಿಂಚಿತ್ತೂ ಭೇದವಿಲ್ಲ. ಶಬ್ದಗಳಲ್ಲಿ ಸ್ವಲ್ಪ ಭೇದ ಮತ್ತು ವಾಕ್ಯಗಳಲ್ಲಿ ತಿರುವುಮುರುವು!

ಹಿತೋಪದೇಶ ಕೃತಿಯಲ್ಲಿ ಒಂದು ಪದ್ಯ ಹೀಗಿದೆ :

ಜಯೇಚ ಲಭತೇ ಲಕ್ಷ್ಮೀ ಮೃತೇಚಾಪಿ ಸುರಾಂಗನಾಮ್
ಕ್ಷಣ ವಿಧ್ವಂಸಿನಃ ಕಾಯಾಃ ಕಾ ಚಿನ್ತಾ ಮರಣೇ ರಣೇ ।।[41]

ಇದಕ್ಕೂ 'ಜಿತೇನ ಲಭ್ಯತೇ.... ಮರಣೇರಣೇ" ಪದ್ಯಕ್ಕೂ ಕೆಲಪಾಠಭೇದಗಳು ಇವೆ ಅಷ್ಟೇ. ಇವುಗಳ ಮೂಲ ಒಂದೇ.

ರಾಮಾಯಣ, ಮಹಾಭಾರತ, ಪಂಚತಂತ್ರ ಹಾಗೂ ಹಿತೋಪದೇಶಗಳು ನಮ್ಮ ನಾಡಿನ ಜನಮನವನ್ನು ಆಕರ್ಷಿಸಿದ ಕೆಲವು ಮಹತ್ವದ ಕೃತಿಗಳು. ಸಾಹಿತ್ಯ ಕೃತಿಗಳು, ಶಾಸನಗಳು ಒಂದಕ್ಕೆ ಇನ್ನೊಂದು ಪೂರಕ; ಜನಪದ ಅದೇ, ಜನಮನ ಅದೇ; ಬರೆಯುವ ಸಾಧನಗಳು ಮಾತ್ರ ಬೇರೆ ಬೇರೆ!!



40 ಶ್ರೀಮದ್ಭಗವದ್ಗೀತಾ, ಅಧ್ಯಾಯ-2, ಶ್ಲೋಕ-37, (ಸಂ. ಸ್ವಾಮಿ ಆದಿದೇವಾನಂದ) ಪು. 34 (1994).

41 ಹಿತೋಪದೇಶ, ಸುಹೃದ್ಭೇದ, ಪದ್ಯ-172, ಪು. 101, (ಚೌಖಂಬಾ ಪ್ರಕಾಶನ).

## ಟೀಕೆ-ಟಿಪ್ಪಣಿಗಳು

# ಶ್ರೀಕೃಷ್ಣದೇವರಾಯನ ಆಮುಕ್ತಮಾಲ್ಯದ ಮತ್ತು ಜಾಂಬವತೀ ಪರಿಣಯಗಳಲ್ಲಿ ಸಾಮಾಜಿಕ ಹಾಗೂ ಸಾಂಸ್ಕೃತಿಕಾಂಶಗಳು

- ದಿ|| ಪ್ರೊ. ಬಿ. ರಾಮಸ್ವಾಮಿ

ಶ್ರೀಕೃಷ್ಣರಾಯನು ಶ್ರೀ ಕಾಕುಳಕ್ಷೇತ್ರದ ಮಧುಮಥನನ ಆಜ್ಞಾನುಸಾರವಾಗಿ ಬರೆದು ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಗೆ ಅಂಕಿತಗೊಳಿಸಿದ ಚಂಪೂ ಮಹಾಪ್ರಬಂಧ 'ಆಮೂಕ್ತಮಾಲ್ಯದ'. ವಿಜಯನಗರದ ವಿರೂಪಾಕ್ಷಸ್ವಾಮಿಯ ಚೈತ್ರೋತ್ಸವದಲ್ಲಿ ನಿರೂಪಿಸುವುದಕ್ಕಾಗಿ ರಚಿಸಿದ ರೂಪಕ ಜಾಂಬವತೀ ಕಲ್ಯಾಣ. ಆಮುಕ್ತಮಾಲ್ಯದದ ಕಥೆ ಕ್ರಿ. ಶ. ಎಂಟನೆಯ ಶತಾಬ್ದದ ಮಧ್ಯಭಾಗಕ್ಕೆ ಸೇರಿದ್ದು. ಜಾಂಬವತೀ ಕಲ್ಯಾಣದ ಕಥೆ ಪೌರಾಣಿಕ. ಕಥೆಯ ಕೆಲವು ವಿವರಗಳಲ್ಲಿಯೂ ವರ್ಣನೆಗಳಲ್ಲಿಯೂ ರಾಯನ ಸಮಕಾಲೀನ ಜೀವನದ ರೀತಿನೀತಿಗಳೂ ಜೀವನಾನುಭವಗಳೂ ಸ್ವಾಭಾವಿಕವಾಗಿ ಸೇರಿಕೊಂಡಿರುವುದನ್ನು ಕಾಣಬಹುದು.

ನಾಟಕದಲ್ಲಿರುವ ಬೇಟೆಯ ಚಿತ್ರವೂ, ಮುಖ್ಯಕಾರ್ಯಕ್ಷೇತ್ರಗಳಲ್ಲಿ ಒಂದಾದ ಕೋದಂಡರಾಮ ದೇವಾಲಯ ಮತ್ತು ಅದರ ಪರಿಸರದ ಉದ್ಯಾನವನ ರಾಯನ ಕಾಲದವೇ. 'ರಾಜಸೇವೆ ಕಷ್ಟ, ಅದರಲ್ಲಿಯೂ ವೃದ್ಧ ಕಂಚುಕಿಗೆ' ಎಂಬ ಕಂಚುಕಿಯ ಉದ್ಗಾರವು ನಿಜ ಜೀವನದಲ್ಲಿ ರಾಯನಿಗೆ ತಿಳಿದಿರಬೇಕು. ಹೆಣ್ಣು ಹುಟ್ಟಿದ್ದುದಕ್ಕಾಗಿ ಜಾಂಬವಂತನು ಕೊರಗುವುದು ರಾಯನ ಕಾಲದಲ್ಲಿದ್ದ ಕೊರಗೇ ಇರಬಹುದು. 'ಪಿತೃಪರವಶ ಶರೀರೆ ನಾನು, ಅತಿ ಕ್ರಮಿಸಬೇಡ ಎಂದು ಕೃಷ್ಣನನ್ನು ತಡೆದು ಅವನ ಗಾಂಧರ್ವ ವಿವಾಹ ಸಲಹೆಯನ್ನು ಜಾಂಬವತಿ ನಿರಾಕರಿಸುವುದು. ಅನಂತರ ಜಾಂಬವಂತನ ಸಮ್ಮತಿಯಿಂದ ಅವನ ತಂದೆ ತಾಯಿಗಳಾದ ಬ್ರಹ್ಮಸರಸ್ವತಿಯರ ಸಮ್ಮುಖದಲ್ಲಿ ಕೃಷ್ಣ ಜಾಂಬವತಿಯರ ಪಾಣಿಗ್ರಹಣವು ಕೃಷ್ಣರಾಯನು ಒಪ್ಪಿ ಮಾಡಿರುವ ಬದಲಾವಣೆ.

ಏಳು ಆಶ್ವಾಸಗಳ 'ಆಮುಕ್ತಮಾಲ್ಯದ'ದಲ್ಲಿ ಕಥಾನಾಯಕಿಯಾದ ಗೋದಾದೇವಿಯ ಕಥೆಯಿರುವುದು ಸುಮಾರು ಐದರಲ್ಲಿ ಒಂದು ಭಾಗದಷ್ಟರಲ್ಲಿ ಮಾತ್ರ. ಉಳಿದ ನಾಲ್ಕು ಭಾಗಗಳಲ್ಲಿ ವಿಷ್ಣುಚಿತ್ತನ ಕಥೆಯೂ ಅಲ್ಲದೆ ಹೃದಯಂಗಮವಾದ ನಾಲ್ಕು ಕಥೆಗಳು ಪುರವರ್ಣನೆ, ಋತು ನಿಯಮ ವರ್ಣನೆ, ರಾಜನೀತಿಯ ವಿವರಗಳೂ ಇವೆ. ಅಲ್ಲದೆ ಪಾಂಡ್ಯರಾಜರಿಬ್ಬರ ಸಭೆಗಳಲ್ಲಿ ನಡೆಯುವ ಮತ ಸಂಬಂಧವಾದ ವಾಗ್ವಾದಗಳು, ಶ್ರೀವೈಷ್ಣವ ಮತ ಪ್ರತಿಷ್ಠಾಪನೆ, ಇವು ರಾಯನ ಕಾಲದ ಧಾರ್ಮಿಕ ಪರಿಸ್ಥಿತಿಯನ್ನು ಸೂಚಿಸುವಂತಿವೆ. ಪುರವರ್ಣನೆಯಲ್ಲಿ ಕಂಡು ಬರುವ ಗೃಹಸ್ಥರು ನಡೆಸುತ್ತಿದ್ದ ಅತಿಥಿ ಸತ್ಕಾರ, ಋತುಧರ್ಮಾನುಸಾರವಾದ ಭೋಜನ ವೈಖರಿ ಮೊದಲಾದವೂ ಋತು ವರ್ಣನೆಗಳಲ್ಲಿ ಕಂಡು ಬರುವ ಸೂಕ್ಷ್ಮವಾದ ಜೀವನ ಚಿತ್ರಗಳೂ ಕೃಷ್ಣರಾಯನ ಕಾಲದ ಸಮಾಜ ಜೀವನ ಚಿತ್ರಗಳೆಂದು ಭಾವಿಸಬಹುದಾಗಿದೆ.

ಗ್ರೀಷ್ಮ ಕಾಲದಲ್ಲಿ ನೀರಿಂಗಿದ ಹೊಳೆಗಳಲ್ಲಿ ಬೋಯಿಗಳ ಚಟುವಟಿಕೆಗಳು, ತೋಟಗಳಲ್ಲಿ ಏತಗಳನ್ನು ತುಳಿದು ಬಾವಿಗಳಿಂದ ನೀರೆತ್ತಿ ಬೆಳೆಗೆ ನೀರು ಹಾಯಿಸುವುದು, ಆಳವಾದ ಬಾವಿಗಳಿಂದ ನೀರು ಸೇದುವುದು, ಅರವಟ್ಟಿಗೆಗಳಲ್ಲಿ ನೀರು ಕೊಡುವ ಚಟುವಟಿಕೆಗಳು ಹೃದಯಂಗಮವಾಗಿ ಚಿತ್ರಿತವಾಗಿವೆ. ಮಳೆಗಾಲದಲ್ಲಿ ಜಡಿಮಳೆ ಹಿಡಿದಾಗ ದಾರಿ ಸಾಗುವ ಪಯಣಿಗರು, ನಾನಾ ದೇಶದ ಪಯಣಿಗರು ಅಕಸ್ಮಾತ್ತಾಗಿ ಮಳೆ ಬಂದಾಗ ಚಾವಡಿಯೊಂದರಲ್ಲಿ ಸೇರಿ ಲೋಕಾಭಿರಾಮವಾಗಿ ಅಶ್ವಪತಿ, ಗಜಪತಿ, ನರಪತಿಗಳ ಪರಸ್ಪರ ಸಾಮರ್ಥ್ಯವನ್ನು ಕುರಿತು ವಾಗ್ಯುದ್ಧದಲ್ಲಿ ತೊಡಗುವುದು, ರೆಡ್ಡಿ ದೊರೆಗಳು ನಿಶ್ಚಿಂತೆಯಿಂದ ಸುಖಲೋಲುಪ್ತರಾಗಿ ಕಾಲ ಕಳೆಯುವುದು ಮೊದಲಾದ ಸಾಮಾಜಿಕ ಜೀವನ ಚಿತ್ರಗಳು ರಾಯನಿಗೆ ಆಗಿನ ಕಾಲದ ಜನತೆಯ ಸೂಕ್ಷ್ಮವಾದ ಜೀವನ ಪರಿಚಯವಿತ್ತೆಂಬುದನ್ನು ಸೂಚಿಸುತ್ತವೆ. ಹೀಗೆಯೇ ಶರತ್ಕಾಲ ವಸಂತ ಕಾಲಗಳ ವರ್ಣನೆಗಳಲ್ಲಿಯೂ ಮನೋಹರವಾದ ದೃಶ್ಯಗಳಿವೆ. ರಾಯನು ಆಗಿನ ಕಾಲದ ಚಾತುರ್ವರ್ಣ್ಯದ ಪರಿಚಯವನ್ನೂ ಮಾಡಿಕೊಟ್ಟಿದ್ದಾನೆ.

ರಾಯನಿಗೆ ಬ್ರಾಹ್ಮಣರಲ್ಲಿ ಹೆಚ್ಚಿನ ಗೌರವ, ನಂಬಿಕೆ, ವಿಶ್ವಾಸಗಳಿದ್ದರೂ ರಾಯನ ದೃಷ್ಟಿಯಲ್ಲಿ ದುರ್ಮಾರ್ಗಿಯಾದ ಬ್ರಾಹ್ಮಣನಿಗಿಂತಲೂ ಸತ್ಯವಂತನಾದ ದೈವಭಕ್ತನಾದ ಚಂಡಾಲನೇ ಶ್ರೇಷ್ಠವೆಂದು ಸೂಚಿಸುವದಕ್ಕಾಗಿಯೆ ಎನ್ನುವಂತೆ, ಭಗವಂತನ ಗುಣಗಾನ ಮಾಡುವುದಕ್ಕಿಂತ ಶ್ರೇಷ್ಠವಾದ ಸೇವೆ ಬೇರೊಂದಿಲ್ಲವೆಂದು ನಿರೂಪಿಸುವ ವರಾಹ ಪುರಾಣಾಂತರ್ಗತ ಮಾಲದಾಸರಿ ಬ್ರಹ್ಮರಾಕ್ಷಸರ ಕಥೆಯನ್ನು ವಿಲ್ಲಿ ಪುತ್ತೂರಿನ ಮನ್ನಾರು ಸ್ವಾಮಿಯೇ ವಿಷ್ಣುಚಿತ್ತನಿಗೆ ಹೇಳಿದಂತೆ ಪ್ರಬಂಧದ ಕೊನೆಯ ಆಶ್ವಾಸದಲ್ಲಿ ರಾಯನು ಸೇರಿಸಿದ್ದಾನೆ, ಇದಕ್ಕೆ ಮೊದಲು ಪಾಂಡ್ಯರಾಜ ಮತ್ಸ್ಯ ಧ್ವಜನ ಆಸ್ಥಾನದಲ್ಲಿ ವಿಷ್ಣುಚಿತ್ತನು ವಿಷ್ಣುಭಕ್ತಿಯೋಗದ ಹೆಚ್ಚಳವನ್ನು ನಿರೂಪಿಸುವುದಕ್ಕಾಗಿ ಹೇಳಿದಂತೆ ಸೇರಿಸಿರುವ ವಿಷ್ಣುಪುರಾಣಾಂತರ್ಗತ ಖಾಂಡಿತ್ಯ ಕೇಳಿಧ್ವಜರ ಕಥೆ, ವಿಲ್ಲಿ ಪುತ್ತೂರಿನ ಮನ್ನಾರು ಸ್ವಾಮಿಯು ಲಕ್ಷ್ಮೀದೇವಿಗೆ ಹೇಳಿದಂತೆ ಸೇರಿಸಿರುವ ಯಾಮುನಾಚಾರ್ಯನ ಕಥೆ ಇವು ಈ ಪ್ರಬಂಧದಲ್ಲಿರುವ ಸಂದರ್ಭೋಚಿತವಾದ ಉಪಕಥೆಗಳು. 'ಧರ್ಮಜ್ಞ'ನಾದ ಕೃಷ್ಣರಾಯನು ನಂಬಿ ಆಚರಿಸುತ್ತಿದ್ದ ವಿಷ್ಣುಭಕ್ತಿಯೇ ಅವನ ಈ ಎರಡು ಕೃತಿಗಳಿಗೂ ಆಧಾರವೆಂದು ಧಾರಾಳವಾಗಿ ಹೇಳಬಹುದು.

ಗೋದಾದೇವಿಯ ಭಕ್ತಿಯನ್ನು ಮೆಚ್ಚಿಕೊಂಡಿದ್ದ ರಂಗನಾಥನು ಪದ್ಧತಿಯ ಪ್ರಕಾರ ಬ್ರಹ್ಮಸರಸ್ವತಿ, ರುದ್ರಗೌರಿಯರನ್ನು ಗೋದೆಯ ತಂದೆ ವಿಷ್ಣುಚಿತ್ತನ ಬಳಿಗೆ ಕಳುಹಿಸಿ ವಿಷ್ಣುಚಿತ್ತನನ್ನು ಒಪ್ಪಿಸಿ ಗೋದಾ ದೇವಿಯನ್ನು ಮದುವೆಯಾಗುತ್ತಾನೆ. ಯಥಾವಿಧಿಯಾಗಿ ವಧೂವರರನ್ನು ಶೃಂಗರಿಸುವುದು, ಕನ್ಯಾದಾನ, ಮಾಂಗಲ್ಯಬಂಧನ, ಅಕ್ಕಿಧಾರೆ, ಲಾಜಾಹೋಮ, ಸಪ್ತಪದಿ, ಅರುಂಧತೀದರ್ಶನ ಎಲ್ಲವೂ ವಿಧಿವತ್ತಾಗಿ ನಡೆದವೆಂದು ರಾಯನು ಗೋದಾದೇವಿ ಶ್ರೀರಂಗನಾಥರ ವಿವಾಹವನ್ನು ವರ್ಣಿಸಿದ್ದಾನೆ. ಇದರಿಂದ ಕೃಷ್ಣದೇವರಾಯನ ಉಪಲಬ್ಧವಾಗಿರುವ ಎರಡು ಕೃತಿಗಳ ಸೂಕ್ಷ್ಮವಾದ ಅಧ್ಯಯನದಿಂದ ರಾಯನ ಕಾಲದ ಅನೇಕ ಸಾಮಾಜಿಕ ಮತ್ತು ಸಾಂಸ್ಕೃತಿಕ ವಿವರಗಳನ್ನು ತಿಳಿಯಬಹುದು. ✦

# ಕನ್ನಡದ ಪ್ರಪ್ರಥಮ ಅಭಿನಯ ಗೀತೆಗಳ ಗ್ರಂಥ 'ಅನುಕರಣ ಗೀತಲಹರಿ'ಯನ್ನು ಕುರಿತು

– ಪ್ರೊ|| ಜಿ. ಅಶ್ವತ್ಥ ನಾರಾಯಣ

ಈ ಶತಮಾನದ ಪ್ರಾರಂಭದ 4 ದಶಕಗಳಲ್ಲಿ ಪಠ್ಯವಾಗಿದ್ದ ಪ್ರಾಥಮಿಕ ಶಾಲೆಗಳಲ್ಲಿ ಜನಪ್ರಿಯವಾಗಿದ್ದ ಅರಮನೆ ವಿದ್ವಾಂಸರಾದ ಜಯರಾಯಾಚಾರ್ಯರಿಂದ ರಚಿತವಾದ 'ಅನುಕರಣಗೀತಲಹರಿ' ಎಂಬ ಮಕ್ಕಳ ಅಭಿನಯ ಗೀತಗಳ ಪುಸ್ತಕ 1902ರಲ್ಲಿ ಮೊದಲ ಬಾರಿಗೆ ಮುದ್ರಿತವಾಯಿತು. ಆ ಮುದ್ರಣಗಳ ಅನಂತರ 1992ರಲ್ಲಿ ಡಾ|| ಟಿ. ವಿ. ವೆಂಕಟಾಚಲಶಾಸ್ತ್ರೀ ಅವರಿಂದ ಸಮರ್ಥವಾಗಿ ಸಂಪಾದಿತವಾಗಿ ಮೈಸೂರಿನ ಡಿವಿಕೆ ಮೂರ್ತಿ ಅವರಿಂದ ಪ್ರಕಟವಾಗಿದೆ. ಹಳೆಯ ತಲೆಮಾರಿನ ಜನಪ್ರಿಯ ಕೃತಿಯೊಂದನ್ನು ಈ ಹೊಸ ತಲೆಮಾರಿಗೆ ದೊರಕಿಸಿದ ಪುಣ್ಯ ಅವರದು.

ಇಂದಿಗೂ ಎಲ್‌ಕೆಜಿ, ಯುಕೆಜಿಗಳಲ್ಲಿ ಬಳಸಲು ಯೋಗ್ಯವಾದ ಅಭಿನಯ ಗೀತಗಳು ಆ ಪುಸ್ತಕದಲ್ಲಿದೆ.

ಈ ಗ್ರಂಥವನ್ನು ಸಂಪಾದಿಸುವಾಗ ಡಾ|| ಟಿ. ವಿ. ವೆಂಕಟಾಚಲಶಾಸ್ತ್ರೀ ಅವರು, ಡಾ|| ಕೆ. ಜಿ. ನಾರಾಯಣಪ್ರಸಾದ್ ಅವರು ಕೊಟ್ಟ ಈ ಗ್ರಂಥದ 2ನೇ ಮುದ್ರಣದ (1921) ಕೈ ಬರಹದ ನಕಲು ಪ್ರತಿಯನ್ನು (ಅಪೂರ್ಣ) ಪ್ರೊ|| ಕ. ವೆಂ. ರಾಜಗೋಪಾಲ ಅವರು ಕೊಟ್ಟ ಮೊದಲ ಮುದ್ರಣದ (1902) ಪ್ರತಿಯನ್ನೂ ಇಟ್ಟುಕೊಂಡು ಈಗಿನ ಪ್ರತಿಯನ್ನು ಸಂಪಾದಿಸಿ ಪ್ರಕಟಿಸಿದ್ದಾರೆ.

ಶಾಸ್ತ್ರಿ ಅವರಿಗೆ ದೊರೆತ ಎರಡೂ ಪ್ರತಿಗಳಲ್ಲಿ ಅನುಕರಣ ಗೀತಲಹರಿಯ ಕೊನೆಯ ಪುಟ ನಷ್ಟವಾಗಿದ್ದು, ಹಾಗೆಯೇ ಪ್ರಕಟಿಸುತ್ತಾ "ಪುಸ್ತಕ ಅಸಮಗ್ರವಾಗಿ ಪ್ರಕಟವಾಗುತ್ತಿರುವುದಕ್ಕೆ ನನಗೆ ಬೇಸರವಿದೆ. ಸದ್ಯ ಇದಕ್ಕೆ ಬೇರೆ ದಾರಿಯಿಲ್ಲ" ಎಂಬ 'ಅರಿಕೆ'ಯಲ್ಲಿ ಕೊರಗಿದ್ದಾರೆ.

30ನೇ ಪದ್ಯ ರಾಗಿಬೀಸುವ ಹಾಡು ಅಪೂರ್ಣವಾಗಿದ್ದು ಅದರ ಅಡಿಟಿಪ್ಪಣಿಯಲ್ಲಿ ಈ ಮಾತುಗಳನ್ನು ಹೇಳಿದ್ದಾರೆ. "ಇನ್ನೂ ಒಂದೆರಡು ನುಡಿಗಳಿರಬಹುದಾದ ಕೊನೆಯ ಮುದ್ರಿತ ಪುಟ ಸಂಪಾದಕನಿಗೆ ದೊರೆತ ಪುಸ್ತಕದಲ್ಲಿ ನಷ್ಟವಾಗಿರುವುದರಿಂದ ಮುಕ್ತಾಯ ಅಸಮಗ್ರವಾಗಿದೆ".

ಆದರೆ ಅದೃಷ್ಟವಶಾತ್ ನನ್ನ ಖಾಸಗಿ ಗ್ರಂಥ ಸಂಗ್ರಹದಲ್ಲಿ 1933ರಲ್ಲಿ ಅಚ್ಚಾದ ಅನುಕರಣಗೀತಲಹರಿಯ 6ನೇ ಮುದ್ರಣದ ಪ್ರತಿ ಪೂರ್ತಿಯಾಗಿದ್ದು, ಕೊನೆಯ ಪುಟವೂ ಇದೆ. ಅದರಲ್ಲಿರುವ 30ನೇ ಪದ್ಯ ರಾಗಿ ಬೀಸುವ ಹಾಡಿನಲ್ಲಿ ಶಾಸ್ತ್ರಿಗಳು ಊಹಿಸಿದಂತೆ

2 ನುಡಿಗಳು ಬಿಟ್ಟುಹೋದವು ಇವೆ. ಇದಲ್ಲದೆ ಶಾಸ್ತ್ರಿಗಳು ಪ್ರಕಟಿಸಿರುವ ಹಾಡಿಗೂ 6ನೇ ಮುದ್ರಣದ ಪ್ರತಿಯಲ್ಲಿರುವ ಹಾಡಿಗೂ ಕೆಲವು ಪಾಠಾಂತರಗಳಿವೆ. ಅದನ್ನು ಈ ಲೇಖನದಲ್ಲಿ ಕೊಟ್ಟಿದೆ. ಮುಂದಿನ ಮುದ್ರಣದಲ್ಲಿ ಪೂರ್ತಿ ಪದ್ಯ ಪ್ರಕಟವಾಗಲು ಅನುಕೂಲವಾಗುವುದಕ್ಕಾಗಿ 6ನೇ ಮುದ್ರಣದ ರಾಗಿ ಬೀಸುವ ಹಾಡು ಅನ್ನು ಪೂರ್ತಿಯಾಗಿ ಇಲ್ಲಿ ಕೊಟ್ಟಿದೆ.

## 30 ರಾಗಿ ಬೀಸುವ ಹಾಡು

*ರಾಗ : ಪೀಲು - ಏಕತಾಳ*

(ಬಾವಿಕಟ್ಟೆಯ ಮೇಗೆಬಾವಾಜಿ)

*ಕೂತುಕೊಂಡು ಬಲಗೈ ಮುಷ್ಟಿ ಹಿಡಿದು,*
*ರಾಗಿ ಬೀಸುವಂತೆ ಗುಂಡಾಗಿ ಮುಷ್ಟಿಯನ್ನು ತಿರುಗಿಸಬೇಕು.*

ರಾಗಿ ಬೀಸುವ ಬೇಗನೆ ಬಾರೆ ।
ನಾಗಿ ಕೆಂಪಿ ಮುನಿನಂಜಿ ॥ ॥ಪ॥

ಬಾಗಿಲ ತೆಕ್ಕೊಂಡು ।
ಹೋಗವರೆ ಗೌಡರು ।
ಬೇಗನೆ ಬರುವರೂಟಕೆ ॥ ॥ ಅ. ಪ ॥

ಹೊತ್ತಾಯಿತವ್ವ ।
ಅತ್ತೆಯ ದೆವ್ವ ।
ಕತ್ತನ್ನು ಮಿಸುಕುವಳವ್ವವ್ವ ॥
ಅತ್ತಿಗೆಯೀಯೋರೆ
ಗಿತ್ತಿಯರೆನ್ನ
ಅತ್ತಿತ್ತ ನೋಡಗೊಡಿಸರು ॥ ॥ ೧ ॥

ಹಿದುಕವರೆಬೇಳೆ ।
ಉದಕವ ಮಾಡಿ ।
ಮುದುಕಪ್ಪಗಿಕ್ಕಬೇಕಂತೆ ॥
ತದಕಿದ ಮೆಣಸಿನ ।
ಉದಕವ ಮಾಡಿ ।
ಮುದುಕವ್ವೆಗಿಕ್ಕಬೇಕಂತೆ ॥ ॥ ೨ ॥

ನೀರಿಗೆ ಹೋದರೆ ।
ಬೇರೊಬ್ಬ ನಾದಿನಿ ।
ದಾರಿಯ ಹಿಂದೆ ಬರುತ್ತಾಳೆ ॥
ಊರೊಳಗಿಲ್ಲದ ।
ದೂರನು ಹೇಳಿ ।
ಹೇರಿಸಿ ನೂಕುವಳಾಮಾರಿ ॥ ॥ ೩ ॥

ಕಾಳನು ಕೇರಿ ।
ಜೋಳವ ಬೀಸಿ ।
ಕೂಳನು ನಿತ್ಯವು ಬೇಯಿಸಿ ॥
ಸೀಳರಿಗಿಕ್ಕಿ ।
ತೋಳು ಬೀಳಾಯಿತು ।
ಬಾಳುವುದೆಂತೋ ನಾ ಕಾಣೆ ॥ ॥ ೪ ॥

ಶಾಸ್ತ್ರಿಗಳು ಪ್ರಕಟಿಸಿದ ಗ್ರಂಥಗಳಲ್ಲಿ 30ನೇ ಹಾಡು ರಾಗಿ ಬೀಸುವ ಹಾಡಿನಲ್ಲಿ ಮೇಲ್ಕಂಡ ಹಾಡಿನ 1 ಮತ್ತು 2 ನುಡಿಗಳಿವೆ 3 ಮತ್ತು 4 ನುಡಿಗಳು ಇಲ್ಲ. ಮತ್ತು ಶಾಸ್ತ್ರಿಗಳು ಸೂಚಿಸಿರುವ 'ದೇವಿ ನಮ್ಮದ್ಯಾವರು ಬಂದರು' ಎಂಬ ಧಾಟಿಯ ಸೂಚನೆ 6ನೇ ಮುದ್ರಣದ ಪ್ರತಿಯಲ್ಲಿಲ್ಲ.

ಇನ್ನು 6ನೇ ಮುದ್ರಣದ ಹಾಡಿಗೂ ಶಾಸ್ತ್ರಿಗಳು ಪ್ರಕಟಿಸಿರುವ ಹಾಡಿಗೂ ಕೆಲವು ಪಾಠಾಂತರಗಳು ಕಂಡು ಬರುತ್ತವೆ.

**ಮರುನಂಜಿ** ಪದಕ್ಕೆ ಬದಲಾಗಿ **ಮುನಿನಂಜಿ**

**ಯುದಕವ ಮಾಡಿ** ಎಂಬುದಕ್ಕೆ ಬದಲಾಗಿ **ಉದಕವ ಮಾಡಿ**

**ಮುದುಕವ್ವ** ಬದಲಾಗಿ ಮುದಕಪ್ಪ

**ಮೆಣಸಿನುಪ್ಪುದಕವ** ಬದಲಾಗಿ **ಮೆಣಸಿನ ಉದಕವ ಮಾಡಿ**

ಎಂಬ ಪಾಠಗಳು 6ನೇ ಮುದ್ರಣದಲ್ಲಿದೆ.

ಈ ಸಂದರ್ಭದಲ್ಲಿ ಇನ್ನೊಂದು ಮಾತನ್ನು ಹೇಳಬಹುದಾಗಿದೆ. ಅನುಕರಣಗೀತಲಹರಿ ಕನ್ನಡದ ಪ್ರಪ್ರಥಮ ಚಿಕ್ಕ ಮಕ್ಕಳ ಅಭಿನಯಗೀತಗಳ ಸ್ವತಂತ್ರ ರಚನೆ ಆಗಿದೆ.

1902ರಲ್ಲಿ ಅನುಕರಣಗೀತಲಹರಿ ಪ್ರಕಟವಾಗುವ ಮೊದಲು 1901ರಲ್ಲಿ 'ಆಟದ ಗೀತಗಳು' ಎಂಬ ಅಭಿನಯ ಗೀತಗಳ (ಆಕ್ಸನ್‌ಸಾಂಗ್ಸ್) 10 ಪುಟಗಳ ಪುಟ್ಟ ಪುಸ್ತಕ ಮೈಸೂರು ವೆಸ್ಲಿಯನ್ ಪ್ರೆಸ್ಸಿನಿಂದ ಮುದ್ರಿತವಾಗಿದೆ. ಇದನ್ನು ಇಂಗ್ಲಿಷ್‌ನಲ್ಲಿರುವ ಗಿಲ್ಸ

ಅವರ 'ಕ್ಯಾಲಿಸ್ಥೆನಿಕ್ ಸಾಂಗ್‌ಬುಕ್' ಇಂದ ಆಯ್ದ 11 ಪದ್ಯಗಳ ಕನ್ನಡಾನುವಾದ ಆಗಿದೆ. ಅನುವಾದಿಸಿದವರು ರೆವರೆಂಡ್ ಎಲ್ಲಿಸ್ ರಾಬರ್ಟ್ಸ್. ಕಿಂಡರ್‌ಗಾರ್ಟನ್ ಮಕ್ಕಳಿಗಾಗಿ ರಚಿತವಾದ ಮಿಷನರಿ ಕನ್ನಡದ ಈ ಮಕ್ಕಳ ಪದ್ಯ ಗ್ರಂಥ ಬಹುಶಃ ಮಿಷನರಿ ಶಾಲೆಗಳಲ್ಲಿ ಬಳಸುತ್ತಿರಬೇಕು. ಇದನ್ನು ಕಂಡ ಆಗಿನ ವಿದ್ಯಾಧಿಕಾರಿ ಭಾಭಾ. ಅವರು ಜಯರಾಯಾಚಾರ್ಯರಿಗೆ ಸರ್ಕಾರಿ ಶಾಲೆಗಳ ಬಳಕೆಗಾಗಿ 30 ವಿಷಯಗಳ ಪಟ್ಟಿಕೊಟ್ಟು ಬರೆಸಿದರು ಎಂದು ಕಾಣುತ್ತದೆ. ಅದೇನೇ ಇರಲಿ. ಜಯರಾಯಾಚಾರ್ಯ ಅವರ ಅನುಕರಣಗೀತಲಹರಿ ಮಕ್ಕಳ ಅಭಿನಯಗೀತಗಳ ಅಚ್ಚಗನ್ನಡದ ಸ್ವತಂತ್ರ ರಚನೆಗಳ ಮೊಟ್ಟ ಮೊದಲನೇ ಗ್ರಂಥ ಮತ್ತು ಜಯರಾಯಾಚಾರ್ಯ ಈ ಶತಮಾನದ ಪ್ರಾರಂಭದ ಮಕ್ಕಳ ಕವಿಗಳಲ್ಲಿ ಒಬ್ಬರು ಎಂಬುದನ್ನು ಗಮನಿಸಬೇಕಾಗಿದೆ.



# ಬಿ.ಎಂ.ಶ್ರೀ. ಪ್ರತಿಷ್ಠಾನದ ಹಸ್ತಪ್ರತಿ ಭಂಡಾರ

ಮೇ 6, 1979ರಂದು ಪ್ರಾರಂಭವಾದ ಈ ಸಂಸ್ಥೆಯ ಮುಖ್ಯ ಉದ್ದೇಶವೇ ಪ್ರಾಚೀನ ಹಸ್ತಪ್ರತಿಗಳನ್ನುಸಂಗ್ರಹಿಸುವುದು, ಸಂರಕ್ಷಿಸುವುದು ಮತ್ತು ಸಂಪಾದಿಸಿ ಪ್ರಕಟಿಸುವುದು. ಆಚಾರ್ಯ ಬಿ.ಎಂ.ಶ್ರೀಯವರ ವಾಣಿಯಾದ "ದೇಶದಲ್ಲಿ ಹುಳು ತಿಂದು ಹೋಗದೆ ಇರುವ ಗ್ರಂಥಗಳನ್ನೆಲ್ಲ ಸಂಗ್ರಹಿಸಿ ಕೊನೆಮಟ್ಟ ಶೋಧಿಸಿ ಒಂದನ್ನೂ ಬಿಡದಂತೆ ಅಚ್ಚುಹಾಕಿಸುವುದು" ಎಂಬುದನ್ನೇ ಧ್ಯೇಯವಾಕ್ಯವಾಗಿಟ್ಟುಕೊಂಡು ಈ ಸಂಸ್ಥೆಯನ್ನು ಸ್ಥಾಪಿಸಿದ ಎಂ.ವಿ.ಸೀತಾರಾಮಯ್ಯನವರು ತಮ್ಮ ವಂಶಸ್ಥರಲ್ಲಿದ್ದ ಸುಮಾರು 300 ಹಸ್ತಪ್ರತಿಗಳನ್ನು ದಾನಮಾಡಿ ಈ ಸಂಸ್ಥೆಯ ಪ್ರಾರಂಭಿಕ ಹಸ್ತಪ್ರತಿ ಸಂಗ್ರಹವನ್ನಾಗಿಸಿದರು. ಅನಂತರ ಈ ಸಂಬಂಧದಲ್ಲಿ ನಡೆಸಿದ ಜನಜಾಗೃತಿ ಕಾರ್ಯಕ್ರಮಗಳು ಹಸ್ತಪ್ರತಿಪ್ರದರ್ಶನ, ಕ್ಷೇತ್ರಕಾರ್ಯ, ವಿಚಾರಗೋಷ್ಠಿ, ಪುಸ್ತಕ ಪ್ರಕಟನೆಗಳಿಂದ ನಿರಂತರವಾಗಿ ಸಂಗ್ರಹ ಸಂರಕ್ಷಣೆ ಕಾರ್ಯ ನಡೆಯುತ್ತಲೇ ಇದ್ದು 2000 ಮಾರ್ಚ್ ವೇಳೆಗೆ ಪ್ರತಿಷ್ಠಾನದ ಹಸ್ತಪ್ರತಿಭಂಡಾರದಲ್ಲಿ ಸಂಗ್ರಹವಾಗಿರುವ ಒಟ್ಟು ಓಲೆಗರಿ-ಕಾಗದದ ಹಸ್ತಪ್ರತಿಗಳ ಸಂಖ್ಯೆ 1,500 ಆಗಿದೆ. ಇವುಗಳಲ್ಲಿರುವ ಗ್ರಂಥಪ್ರತಿಗಳ ಸಂಖ್ಯೆ ಸುಮಾರು 3,000 ಇದೆ. ಈ ಸಂಸ್ಥೆಯ ಗೌರವ ಕಾರ್ಯದರ್ಶಿಗಳಾದ ಹಸ್ತಪ್ರತಿಭಂಡಾರದ ವ್ಯವಸ್ಥಾಪಕರೂ ಆದ ಶ್ರೀ ನಾ. ಗೀತಾಚಾರ್ಯ ಅವರು ಪ್ರಾರಂಭದಿಂದಲೂ ಸಂಸ್ಥಾಪಕರೊಂದಿಗಿದ್ದು ಹಸ್ತಪ್ರತಿಭಂಡಾರವನ್ನು ಉತ್ತಮ ರೀತಿಯಲ್ಲಿ ಬೆಳೆಸಿದ್ದಾರೆ. ಯಾವುದೇ ನಿರ್ದಿಷ್ಟ ಹಣಕಾಸಿನ ಸಹಾಯವಿಲ್ಲದೆ ಒಂದು ಖಾಸಗಿ ಸಂಸ್ಥೆಯಾಗಿ ಈ ಇಪ್ಪತ್ತು ವರ್ಷಗಳಲ್ಲಿ ಪ್ರತಿಷ್ಠಾನ ಹಸ್ತಪ್ರತಿ ಕ್ಷೇತ್ರದಲ್ಲಿ ನಡೆಸಿರುವ ಸಾಧನೆ ಸಣ್ಣದೇನಲ್ಲ. ದಾಖಲೆಯಾಗಿ ನಿಲ್ಲುವಂತಹದು. ಕರ್ನಾಟಕದಲ್ಲಿ ನಿರ್ಲಕ್ಷಿಸಲ್ಪಟ್ಟಿದ್ದ ಈ ವಿಭಾಗ ಮತ್ತೆ ಚೇತರಿಸಿಕೊಂಡು 'ಹಸ್ತಪ್ರತಿ ಶಾಸ್ತ್ರ' ಎಂಬ ನೂತನ ಪರಿಕಲ್ಪನೆಯಾಗಿ ಬೆಳೆಯಲು ಈ ಸಂಸ್ಥೆಯೇ ಮೂಲ ಕಾರಣ ಮತ್ತು ಮುಖ್ಯ ಪ್ರೇರಣೆ ಎನ್ನುವಷ್ಟರಮಟ್ಟಿಗೆ ಇದರ ಸಾಧನೆಯಿದೆ. ಈ ಸಾಧನೆಗಳನ್ನು ಜಾಗೃತಿಕಾರ್ಯ, ಪ್ರಕಟನಾಕಾರ್ಯ ಮತ್ತು ಅಧ್ಯಯನ ಶಿಸ್ತು ನಿರ್ಮಾಣಕಾರ್ಯ ಎಂದು ಮೂರು ವಿಧದಲ್ಲಿ ಗುರುತಿಸಬಹುದು.

**1) ಜಾಗೃತಿ ಕಾರ್ಯ :** ಪ್ರತಿಷ್ಠಾನ ಪ್ರಾರಂಭವಾದ ಕಾಲದಲ್ಲಿ ವಚನ ಪಿತಾಮಹ ಫ. ಗು. ಹಳಕಟ್ಟಿ ಜನ್ಮಶತಮಾನೋತ್ಸವ ಬಂದುದನ್ನು (1982) ಬಳಸಿಕೊಂಡು ಅದನ್ನು 'ಹಸ್ತಪ್ರತಿವರ್ಷ' ಎಂದು ಘೋಷಿಸಿ ಒಂದು ಕಡೆ ರಾಜ್ಯದಾದ್ಯಂತ ಹಸ್ತಪ್ರತಿಗಳ ಪ್ರದರ್ಶನ, ಹಸ್ತಪ್ರತಿ ವರ್ಷಾಚರಣೆಯ ಕಾರ್ಯಕ್ರಮಗಳನ್ನು ಸಂಘಟಿಸುವ ಮೂಲಕ ಸಾಮಾನ್ಯ ವರ್ಗದಲ್ಲಿ ಈ ಕ್ಷೇತ್ರದ ಬಗ್ಗೆ ಆಸಕ್ತಿ ಬೆಳೆಸಿದರೆ ಇನ್ನೊಂದು ಕಡೆ ರಾಜ್ಯ-ರಾಷ್ಟ್ರಮಟ್ಟದ ವಿಚಾರಗೋಷ್ಠಿಗಳನ್ನು ನಡೆಸಿ ವಿದ್ವಾಂಸವಲಯದ ಗಮನವನ್ನು ಇತ್ತ ಸೆಳೆಯಲಾಯಿತು. ಇದರ ಪರಿಣಾಮವಾಗಿ ಅನೇಕರು ಸ್ವಯಂಪ್ರೇರಿತರಾಗಿ ಹಸ್ತಪ್ರತಿಗಳನ್ನು ಸಂಗ್ರಹಾಲಯಗಳಿಗೆ ನೀಡಿದರು. ಸಂಗ್ರಹಾಲಯಗಳು ತಮ್ಮಲ್ಲಿರುವ ಹಸ್ತಪ್ರತಿಗಳನ್ನು

ಕತ್ತಲಕೋಣೆಯಿಂದ ಹೊರತೆಗೆದವು; ಮಠಮಾನ್ಯಗಳು ಧೂಳು ಕೊಡವಿ ಮೇಲೆದ್ದವು. ತಮ್ಮಲ್ಲಿದ್ದ ಹಸ್ತಪ್ರತಿಗಳನ್ನು ಸಂರಕ್ಷಿಸಲು ಕಾಳಜಿವಹಿಸಿದ್ದಲ್ಲದೆ ಸೂಚಿಗಳ ತಯಾರಿಕೆಗೆ ಮುಂದಾದವು. ವಿಶ್ವವಿದ್ಯಾನಿಲಯಗಳು ತಮ್ಮ ಪಠ್ಯ ವಿಷಯಗಳಲ್ಲಿ ಗ್ರಂಥ ಸಂಪಾದನೆಯ ಜೊತೆಗೆ 'ಹಸ್ತಪ್ರತಿಶಾಸ್ತ್ರ'ವನ್ನೂ ಸೇರಿಸಿದವು. ಪ್ರತಿಷ್ಠಾನ ಪ್ರತಿವರ್ಷ ಹಸ್ತಪ್ರತಿಪ್ರದರ್ಶನವನ್ನು ಏರ್ಪಡಿಸಿ ಜನಜಾಗೃತಿ ಮೂಡಿಸುವ ಕಾರ್ಯವನ್ನು ನಿರಂತರವಾಗಿ ನಡೆಸಿಕೊಂಡು ಬರುತ್ತಿದೆ. 1982ರಲ್ಲಿ ನಡೆಸಿದ ರಾಷ್ಟ್ರಮಟ್ಟದ ವಿಚಾರಗೋಷ್ಠಿಯಲ್ಲಿ ತಜ್ಞರೆಲ್ಲ ಒಂದು ಕಡೆ ಸೇರಿ ಜನರಲ್ಲಿನ ಈ ಜಾಗೃತಿಯನ್ನು ಇನ್ನಷ್ಟು ಮೂಡಿಸಲು ಕೆಲವು ಉಪಯುಕ್ತ ನಿರ್ಣಯಗಳನ್ನು ಕೈಗೊಂಡರು. ಇವುಗಳನ್ನು ಪ್ರತಿಷ್ಠಾನ ತನ್ನ ಮಿತಿಯಲ್ಲಿ ಜಾರಿಗೊಳಿಸುತ್ತಿದ್ದರೂ ಇವು ಸಾರ್ವಜನಿಕವಾಗಿ ಸಾಂಸ್ಥಿಕವಾಗಿ ಜಾರಿಗೊಳ್ಳುವ ಅಗತ್ಯವಿದೆ. ಆ ನಿರ್ಣಯಗಳನ್ನು ಈಗ ಮತ್ತೆ ನೆನಪಿಸಿಕೊಳ್ಳುವುದು ಅತ್ಯವಶ್ಯಕವಾಗಿದೆ. ಇದರಲ್ಲಿ ಅನೇಕ ತಜ್ಞರ ಚಿಂತನೆ ಅಡಗಿದೆ. "ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಹಾಗೂ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸಂಯುಕ್ತಾಶ್ರಯದಲ್ಲಿ 30-1-1981 ರಿಂದ ಮೂರು ದಿನ ಬೆಂಗಳೂರು ಗೋಖಲೆ ಸಾರ್ವಜನಿಕ ಸಂಸ್ಥೆಯ ಸಭಾಂಗಣದಲ್ಲಿ ಹಸ್ತಪ್ರತಿಶಾಸ್ತ್ರ ವಿಚಾರಗೋಷ್ಠಿ ನಡೆಯಿಸಿತು. 1-2-1981ರಂದು ಅಪರಾಹ್ನ ಸಮಾರೋಪ ಸಮಾರಂಭ ನಡೆಯಿತು. ಪ್ರತಿಷ್ಠಾನದ ಅಧ್ಯಕ್ಷರಾದ ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾವ್ ಅವರು ಅಧ್ಯಕ್ಷತೆ ವಹಿಸಿದ್ದರು. ಅಂದಿನ ಸಭೆಗೆ ಆಗಮಿಸಿದ್ದ ವಿದ್ವಾಂಸರ ಸಭೆಯ ಬಹಿರಂಗಾಧಿವೇಶನದಲ್ಲಿ ಈ ಕೆಳಗಿನ ನಿರ್ಣಯಗಳನ್ನು ಅಧ್ಯಕ್ಷರು ಸೂಚಿಸಿ, ಸಭೆಯ ಮುಂದಿಟ್ಟರು. ಡಾ|| ಕೆ. ಕೃಷ್ಣಮೂರ್ತಿ ಮತ್ತು ಶ್ರೀ ಎನ್. ಬಸವಾರಾಧ್ಯರು ಅನುಮೋದಿಸಿದರು. ನಿರ್ಣಯಗಳು ಸರ್ವಾನುಮತದಿಂದ ಅಂಗೀಕೃತವಾದವು"*. (ನಿರ್ಣಯಗಳಿಗೆ ನೋಡಿ : ಪರಿಶಿಷ್ಟ-1)

**2) ಪ್ರಕಟನಾ ಕಾರ್ಯ :** ಫ. ಗು. ಹಳಕಟ್ಟಿ ಶತಮಾನೋತ್ಸವ ಸ್ಮರಣೆಗಾಗಿ ಪ್ರಕಟಿಸಿದ ಸಂಸ್ಮರಣಗ್ರಂಥ 'ಮಣಿಹ' (1982) ಮತ್ತು ರಾಷ್ಟ್ರಮಟ್ಟದಲ್ಲಿ ನಡೆಸಿದ ವಿಚಾರಗೋಷ್ಠಿಯ ಲೇಖನಗಳ ಸಂಕಲನ 'ಹಸ್ತಪ್ರತಿಶಾಸ್ತ್ರ' (1983) ಈ ಕ್ಷೇತ್ರದಲ್ಲಿ ಪ್ರತಿಷ್ಠಾನ ಪ್ರಕಟಿಸಿದ ಪ್ರಮುಖ ಕೃತಿಗಳು. ಇವು ಹಸ್ತಪ್ರತಿ ಶಾಸ್ತ್ರದಲ್ಲಿ ಮುಂದೆ ನಡೆದ ಎಲ್ಲ ಪ್ರಕಟನೆಗಳಿಗೂ ಪ್ರಾಥಮಿಕ ಮತ್ತು ಆಕರ ಗ್ರಂಥಗಳಾಗಿ ಸ್ಥಾನ ಪಡೆದಿವೆ. ಸುಮಾರು 50ಕ್ಕೂ ಹೆಚ್ಚು ಜನ ಲೇಖಕರಿಂದ ಲೇಖನ ಪಡೆಯುವುದರ ಮೂಲಕ ಇದರ ಮಹತ್ವವನ್ನು ಹೆಚ್ಚಿಸಿರುವರಲ್ಲದೆ ನವ ಆಸಕ್ತರಿಗೆ ಪ್ರೇರಣೆಯಾಗಿಯೂ ಈ ಕೃತಿಗಳು ನಿಂತಿವೆ. ಪ್ರತಿಷ್ಠಾನ ಈವರೆಗೆ ಸಿದ್ಧಪಡಿಸಿರುವ ಸೂಚಿಗಳು ಮೂರಾದರೂ ಪ್ರಕಟಿಸಿರುವುದು ಕೇವಲ ಒಂದು ಮಾತ್ರ. ಕೆಳದಿ ಗುಂಡಾಜೋಯಿಸ್ ಮತ್ತು ನಾ. ಗೀತಾಚಾರ್ಯರ ಸಂಪಾದಕತ್ವದಲ್ಲಿ

---

* ವಾರ್ತಾಪತ್ರ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ಸಂ.:4, ಮಾರ್ಚ್ 81, ಪು 45 (ಅನುಬಂಧ). ಇದರಲ್ಲಿ ಈ ಟಿಪ್ಪಣಿಯೊಂದಿಗೆ 17 ನಿರ್ಣಯಗಳಿವೆ.

ಪ್ರಕಟವಾಗಿರುವ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಭಾಗ-1ರಲ್ಲಿ (1987) 79 ಓಲೆಗ
ಹಸ್ತಪ್ರತಿಕಟ್ಟುಗಳಲ್ಲಿರುವ 96 ಕೃತಿಗಳು ದಾಖಲಾಗಿವೆ. ಭಾಗ-2ರಲ್ಲಿ 80 ಕಾಗ
ಹಸ್ತಪ್ರತಿಗಳಿದ್ದು 104 ಕೃತಿಗಳು ದಾಖಲಾಗಿವೆ. ಇದನ್ನು ನಾ.ಗೀತಾಚಾರ
ಸಂಪಾದಿಸಿದ್ದಾರೆ. ಭಾಗ-3ರಲ್ಲಿ 90 ಹಸ್ತಪ್ರತಿಕಟ್ಟುಗಳಲ್ಲಿರುವ 150 ಕೃತಿಗಳ ಸೂ
ಪ್ರಕಟನೆಗೆ ಸಿದ್ಧವಾಗುತ್ತಿದೆ. ಇದನ್ನು ನಾ. ಗೀತಾಚಾರ್ಯ ಎನ್. ಎಸ್. ರಾಮಸ್ವಾಮಿ
ಅಯ್ಯರ್ ಜಿ. ಶಂಭಣ್ಣ ಅವರ ಮಾರ್ಗದರ್ಶನದಲ್ಲಿ ಹಸ್ತಪ್ರತಿ ವಿದ್ಯಾರ್ಥಿಗಳು
ಸಿದ್ಧಪಡಿಸುತ್ತಿದ್ದಾರೆ.

ಈ ಕ್ಷೇತ್ರದಲ್ಲಿ ಪ್ರತಿಷ್ಠಾನದ ಇನ್ನೊಂದು ಮುಖ್ಯ ಪ್ರಕಟನೆಯೆಂದರೆ 'ಹಸ್ತಪ್ರತಿಶಾಸ್ತ್ರ
ಪರಿಚಯ' ಪ್ರತಿಷ್ಠಾನ ನಡೆಸುತ್ತಿರುವ 'ಹಸ್ತಪ್ರತಿಶಾಸ್ತ್ರ ತರಗತಿ'ಯ ಪಠ್ಯವನ್ನಾಗಿ ಈ
ಗ್ರಂಥವನ್ನು ಪರಿಗಣಿಸಲಾಗಿದ್ದು ಈ ಶಾಸ್ತ್ರದ ಅಧ್ಯಯನದ ಸ್ಥೂಲ ಸ್ವರೂಪವನ್ನು ಇದು
ಒಳಗೊಂಡಿದೆ.

ಪ್ರತಿಷ್ಠಾನ ಈವರೆಗೆ 15 ಪ್ರಾಚೀನ ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದೆ. ಇವುಗಳಲ್ಲಿ
ಭಿನ್ನಪಾಠ ಪರಂಪರೆ ಇರುವ ಸರ್ವಜ್ಞವಚನಗಳು (1982) 'ಸೂತಭಾರತ' (1982)
'ಕುಮಾರವ್ಯಾಸ ಭಾರತ ಸಂಗ್ರಹ' (1990) ಗಮನಾರ್ಹವಾಗಿದೆ. ಅಪ್ರಕಟಿತ ಕೃತಿಗಳಾದ
ತಿಮ್ಮಪ್ಪದಾಸರ 'ಶ್ರೀಕೃಷ್ಣಬಾಲಲೀಲೆ' ಭಾಗ-1, 2 (1986, 96) 'ಧ್ರುವಚರಿತ್ರೆ'
(1983)ಗಳಲ್ಲದೆ ಇನ್ನೂ ಅನೇಕ ಕೃತಿಗಳನ್ನು ಪರಿಚಯಿಸಲಾಗಿದೆ. ಶ್ರೀ ಕೃಷ್ಣಬಾಲಲೀಲೆ
ಕೀರ್ತನ ಪ್ರಕಾರದಲ್ಲಿರುವ 2 ಸಂಪುಟಗಳ ಬೃಹತ್ ಕಾವ್ಯವಾಗಿದೆ. ಕೀರ್ತನ
ಕುಸುಮಾಂಜಲಿ (1980) ಬೇಟೆರಾಯದೀಕ್ಷಿತರ ಕೀರ್ತನೆಗಳು (1996) ಮುಂತಾದ
ನೂತನ ಕೀರ್ತನೆಗಳನ್ನೂ ಸಂಪಾದಿಸಿ ಪ್ರಕಟಿಸಲಾಗಿದೆ. 'ಶ್ರೀಕೃಷ್ಣದೇವರಾಯನ ದಿನಚರಿ'
(1983) ಪ್ರತಿಷ್ಠಾನದ ಮಹತ್ವದ ಪ್ರಕಟನೆಗಳಲ್ಲಿ ಇನ್ನೊಂದು. ಇದು ಕೃಷ್ಣದೇವರಾಯನ
ಇತಿಹಾಸದ ಮೇಲೆ ಬೆಳಕು ಚೆಲ್ಲಿರುವ ಐತಿಹಾಸಿಕ ಕೃತಿ. 'ಶ್ರೀನಿವಾಸ ಕಲ್ಯಾಣ' (1986)
ಪದ್ಮಿನಿ ಕಲ್ಯಾಣ (1995) ಚಂದ್ರಚೂಡಾಮಣಿಶತಕ (1989) ಮರುನ್ನಂದನಶತಕ
(1989) ಮುಂತಾದ ಕೃತಿಗಳನ್ನೂ ಇಲ್ಲಿ ಹೆಸರಿಸಬಹುದು.

3) **ಶಾಸ್ತ್ರ ನಿರ್ಮಾಣಕಾರ್ಯ** : 'ಹಸ್ತಪ್ರತಿಶಾಸ್ತ್ರ'ದ ಪದದ ನಿಷ್ಪತ್ತಿಯಿಂದ
ಹಿಡಿದು ಅದರ ವ್ಯಾಪ್ತಿ, ವ್ಯಾಖ್ಯೆ, ಪಠ್ಯ ವಿಷಯದ ನಿರ್ಮಾಣ ಮತ್ತು ಪ್ರಾಯೋಗಿಕವಾಗಿ
ಬೋಧನೆಯ ಶಿಸ್ತನ್ನಾಗಿಸುವವರೆಗೆ ಈ ಕ್ಷೇತ್ರದಲ್ಲಿ ಪ್ರತಿಷ್ಠಾನದ ಕೊಡುಗೆಯಿದೆ. ಮೊದಲ
ಬಾರಿಗೆ 'ಹಸ್ತಪ್ರತಿಶಾಸ್ತ್ರ' ಪದವನ್ನು ಚಲಾವಣೆ ಮಾಡಿ ಅದರ ಪರ್ಯಾಯ ಪದವಾಗಿ
ಇಂಗ್ಲೀಷನಲ್ಲಿ 'ಮ್ಯಾನ್‌ಸ್ಕ್ರಿಪ್ಟಾಲಜಿ'ಯನ್ನು ಠಂಕಿಸಿ ನಿಘಂಟಿಗೆ ಸೇರಿಸಿದ ಕೀರ್ತಿ
ಪ್ರತಿಷ್ಠಾನದ್ದು. ಕೇವಲ ಸಂಪಾದನೆಯ ದೃಷ್ಟಿಯಲ್ಲಿ ಮಾತ್ರ ಗ್ರಹಿಸಿದ್ದ ಹಸ್ತಪ್ರತಿಗಳನ್ನು
ಅದರ ಸಂರಕ್ಷಣೆ ಮತ್ತು ವಿವಿಧ ಮುಖಗಳ ಅಧ್ಯಯನ ದೃಷ್ಟಿಯತ್ತ ಹೊರಳಿಸಿದುದು
ಹಸ್ತಪ್ರತಿಶಾಸ್ತ್ರದ ವೈಶಿಷ್ಟ್ಯ. ನೂತನ ಅಧ್ಯಯನ ಶಾಸ್ತ್ರವನ್ನಾಗಿ ಪರಿವರ್ತಿಸಿದ ಪ್ರತಿಷ್ಠಾನದ

ಪ್ರಯತ್ನ ಹಲವು ವಿಶ್ವವಿದ್ಯಾಲಯಗಳಲ್ಲಿ ಅಸ್ತಿತ್ವವನ್ನು ಪಡೆಯಿತು. ಉನ್ನತ ಅಧ್ಯಯನದಲ್ಲಿ ಪಠ್ಯ ವಿಷಯದಿಂದ ಜಾರುತ್ತಿದ್ದ ಗ್ರಂಥ ಸಂಪಾದನೆ ಈ ಕಾರಣದಿಂದ ಹೊಸ ಆವಿಷ್ಕಾರ ಪಡೆದು ಮತ್ತೆ ಉಳಿಯುವಂತಾಯಿತು. ಕನ್ನಡ ವಿಶ್ವವಿದ್ಯಾನಿಲಯ 'ಹಸ್ತಪ್ರತಿಶಾಸ್ತ್ರ' ವಿಭಾಗವನ್ನೇ ತೆಗೆಯುವಂತಾಯಿತು.

ಪ್ರತಿಷ್ಠಾನ ನಡೆಸಿದ ಈ ಕ್ಷೇತ್ರದ ಬಗೆಗಿನ ಚಿಂತನೆ ಮತ್ತು ಪ್ರಕಟಿಸಿದ 'ಮಣಿಹ' ಹಾಗೂ ಹಸ್ತಪ್ರತಿಶಾಸ್ತ್ರ ಆಕರ ಗ್ರಂಥಗಳ ಮೂಲಕ ಇದರ ಭೂಮಿಕೆ ರೂಪಗೊಂಡು ಡಾ|| ಎಂ. ಎಂ. ಕಲಬುರ್ಗಿಯವರ ಕನ್ನಡ ಹಸ್ತಪ್ರತಿಶಾಸ್ತ್ರ (1993) ಮತ್ತು ಬಿ. ಎಸ್. ಸಣ್ಣಯ್ಯ ಅವರ ಹಸ್ತಪ್ರತಿಶಾಸ್ತ್ರ ಪರಿಚಯ (1993) ಎಂಬ ಶಾಸ್ತ್ರಬದ್ಧ ಕೃತಿಗಳ ರಚನೆಯವರೆಗೂ ಈ ಶಿಸ್ತು ಅಧಿಕೃತತೆಯನ್ನು ಪಡೆಯಿತು. ಪ್ರತಿಷ್ಠಾನವೇ 'ಹಸ್ತಪ್ರತಿಶಾಸ್ತ್ರ ಪರಿಚಯ' ಪುಸ್ತಕವನ್ನು ಪ್ರಕಟಿಸಿದ್ದಲ್ಲದೆ ನಿರ್ದಿಷ್ಟ ಪಠ್ಯವಿಷಯವನ್ನು ರೂಪಿಸಿ 1990ರಿಂದಲೂ "ಹಸ್ತಪ್ರತಿಶಾಸ್ತ್ರ ತರಗತಿ"ಗಳನ್ನು ನಡೆಸುತ್ತ ನವಪೀಳಿಗೆಯಲ್ಲಿ ಈ ಕ್ಷೇತ್ರದತ್ತ ಆಸಕ್ತಿ ಹೊರಳಿಸಲಾಗುತ್ತದೆ. ಪ್ರತಿ ವರ್ಷ ಕನಿಷ್ಠ 5 ಜನ ಆಸಕ್ತರಿಗೆ ಹಸ್ತಪ್ರತಿಗಳ ಮಹತ್ವ - ಸಂಗ್ರಹ ಸಂರಕ್ಷಣೆ - ಸಂಪ್ರತೀಕರಣ ಹಾಗೂ ದಾಖಲೀಕರಣ ಮತ್ತು ಗ್ರಂಥ ಸಂಪಾದನೆಯ ತರಬೇತಿ ನೀಡಿ ಪರಿಣಿತರನ್ನಾಗಿ ರೂಪಿಸುತ್ತಿದೆ. ಇದು ಕರ್ನಾಟಕದಲ್ಲೇ ಏಕೈಕ ಪ್ರಯತ್ನವಾಗಿದೆ. ಈ ತರಗತಿಗಾಗಿ ಪ್ರತಿಷ್ಠಾನ ಸಿದ್ಧಪಡಿಸಿರುವ ಪಠ್ಯವಿಷಯ ಈ ರೀತಿ ಇದೆ. (ನೋಡಿ ಪರಿಶಿಷ್ಟ-2).

4) **ಹಸ್ತಪ್ರತಿ ಭಂಡಾರ** : ಪ್ರತಿಷ್ಠಾನದ ಹಸ್ತಪ್ರತಿ ಭಂಡಾರ ತಕ್ಕಮಟ್ಟಿಗೆ ಸುಸಜ್ಜಿತವಾಗಿದೆ. ಹಸ್ತಪ್ರತಿಗಳನ್ನು ಸಂಗ್ರಹಿಸಲು ವಿಶೇಷ ತಂತ್ರಜ್ಞಾನದಿಂದ ತಯಾರಿಸಿರುವ ಬೀರುಗಳು ಹಸ್ತಪ್ರತಿಗಳಿಗೆ ರಾಸಾಯನಿಕ ಚಿಕಿತ್ಸೆ ನೀಡುವ ವೈಜ್ಞಾನಿಕ ಸಾಧನವಾದ ಫ್ಯೂಮಿಗೇಷನ್ ಛೇಂಬರ್ (ಪ್ರಧೂಮನ ಕಪಾಟು) ಮೈಕ್ರೊಫಿಲಂ ರೀಡರ್‌ಗಳ ಸೌಲಭ್ಯಗಳಿದ್ದು ಹಸ್ತಪ್ರತಿಗಳನ್ನು ಸಂರಕ್ಷಿಸಲು ಆಧುನಿಕವಾದ ಸಿಟ್ರೆನೆಲ್ಲ ಆಯಿಲ್ ಅನ್ನು ಉಪಯೋಗಿಸಲಾಗುತ್ತಿದೆ. ಇದೀಗ ಸ್ವಂತ ಕಟ್ಟಡ 'ಬಿ.ಎಂ.ಶ್ರೀ. ಕಲಾಭವನ'ವು ನಿರ್ಮಾಣ ಹಂತದಲ್ಲಿದ್ದು ಅದರಲ್ಲಿ ಪ್ರತ್ಯೇಕ ಸುಸಜ್ಜಿತ ಹಸ್ತಪ್ರತಿ ಸಂಗ್ರಹಾಲಯ ವ್ಯವಸ್ಥೆಗೊಳ್ಳುತ್ತದೆ.

5) **ಕೆಲವು ಮುಖ್ಯ ಹಸ್ತಪ್ರತಿಗಳು** : ಪ್ರತಿಷ್ಠಾನದ ಹಸ್ತಪ್ರತಿಭಂಡಾರದಲ್ಲಿರುವ ಅತಿಸಣ್ಣ ಹಸ್ತಪ್ರತಿಯಾದ 'ಗೌಳಿಶಕುನ' (ಓ.475) ಎಂಟು ಸೆಂ.ಮೀ. ಉದ್ದ ಎರಡೂವರೆ ಸೆಂ.ಮೀ. ಅಗಲವಿದೆ. ಅತಿದೊಡ್ಡ ಹಸ್ತಪ್ರತಿ 'ಶ್ರೀಮದ್ಭಾಗವತ ಭಾವಾರ್ಥ ದೀಪಿಕಾ ಶ್ರೀಧರೀಯ ವ್ಯಾಖ್ಯಾನ' (ಓ.511) ಇದ್ದು 90 ಸೆಂ.ಮೀ. ಉದ್ದ 5 ಸೆಂ.ಮೀ. ಅಗಲವಿದ್ದು ಸರಾಸರಿ ಒಂದು ಗರಿಯಲ್ಲಿ 9 ಸಾಲುಗಳು, ಒಂದು ಸಾಲಿನಲ್ಲಿ 195 ಅಕ್ಷರಗಳಿವೆ : ಅತ್ಯಂತ ಒತ್ತಟ್ಟಾದ ಆದರೆ ಸ್ಫುಟವಾದ ಸಣ್ಣ ಬರವಣಿಗೆ ಇರುವ ಹಸ್ತಪ್ರತಿ 'ಶ್ರೀಮದ್ರಾಮಾಯಣ' (ಓ.517) 5 ಸೆಂ.ಮೀ. ಅಗಲ 24 ಸೆಂ.ಮೀ. ಉದ್ದದ ಪ್ರತಿಗರಿಯಲ್ಲಿ 16 ಸಾಲುಗಳೂ ಪ್ರತಿಸಾಲಿನಲ್ಲಿ 80 ಅಕ್ಷರಗಳೂ ಇವೆ.

ಪ್ರತಿಷ್ಠಾನದ ಭಂಡಾರದಲ್ಲಿರುವ ವಿಶೇಷ ಹಸ್ತಪ್ರತಿಗಳೆಂದರೆ (1) ಕುಮಾರವ್ಯಾಸಭಾರತ ಸಂಗ್ರಹದ ಕಾಗದದ ಹಸ್ತಪ್ರತಿ. (ಕಾ.67) ಇದರಲ್ಲಿ ಆಚಾರ್ಯ ಬಿ.ಎಂ.ಶ್ರೀ., ಟಿ. ಎಸ್. ವೆಂಕಣ್ಣಯ್ಯ, ಎ. ಆರ್. ಕೃಷ್ಣಶಾಸ್ತ್ರ, ಡಿ. ಎಲ್. ನರಸಿಂಹಾಚಾರ್ ಮುಂತಾದವರು ಪರಿಶೀಲಿಸಿರುವ ಪಾಠಾಂತರ ಸೂಚನೆಗಳಿವೆ. (2) ಮೈಸೂರು ಶೈಲಿಯ ವರ್ಣಚಿತ್ರಗಳಿರುವ ಹಸ್ತಪ್ರತಿ 'ಸ್ತೋತ್ರರತ್ನಾಕರ ಅಥವಾ ದೇವತಾನಾಮ ಕುಸುಮ ಮಂಜರಿ' (ಕಾ. 138) ಇದರಲ್ಲಿ 98 ಪುಟಗಳಿದ್ದು 200ಕ್ಕೂ ಹೆಚ್ಚು ವರ್ಣಚಿತ್ರಗಳಿವೆ. (3) ತಿಮ್ಮಪ್ಪದಾಸರ ಸ್ವಹಸ್ತಾಕ್ಷರವಿರುವ 20 ಹಸ್ತಪ್ರತಿಗಳು ಪ್ರತಿಷ್ಠಾನದ ಹಸ್ತಪ್ರತಿಭಂಡಾರದ ಆಸ್ತಿಯಾಗಿದೆ. ಇವುಗಳಲ್ಲಿ ಇನ್ನೂ ಸುಮಾರು 500 ಕೀರ್ತನೆಗಳು ಮತ್ತು ಅವರ ಎಲ್ಲ ಕೃತಿಗಳೂ ಅಪ್ರಕಟಿತವಾಗಿವೆ. ಕೀರ್ತನೆಗಳನ್ನು ಪೂರ್ತಿ ಪ್ರತಿ ಮಾಡಲಾಗಿದ್ದು ಪ್ರಕಟಣೆಗೆ ಹಸ್ತಪ್ರತಿಯನ್ನು ಸಿದ್ಧಪಡಿಸಲಾಗಿದೆಯಲ್ಲದೆ ಸರ್ಕಾರದ ಸಮಗ್ರ ದಾಸ ಸಾಹಿತ್ಯ ಪ್ರಕಟನೆ ಯೋಜನೆಗೂ ನೀಡಿದೆ. (4) 'ಶ್ರೀ ಕೃಷ್ಣದೇವರಾಯ ದಿನಚರಿ' ಓಲೆಗರಿಯಲ್ಲಿರುವ ಕೈಫಿಯತ್ತಿನ ರೂಪದ ಹಸ್ತಪ್ರತಿಯಾಗಿದ್ದು ವಿಶೇಷವಾಗಿದೆ. ಈಗಾಗಲೇ ಈ ಕೃತಿ ವಿದ್ವಾಂಸರ ಅಭಿಪ್ರಾಯದಲ್ಲಿ ವಿಜಯನಗರ ಕಾಲದ ಇತಿಹಾಸ ಪುನಾರಚನೆಗೆ ಒಂದು ಮುಖ್ಯ ಆಕರವಾಗಿ ಪರಿಣಮಿಸಿದೆ.

ದಂತದ ಕೆತ್ತನೆಯಿರುವ, ವರ್ಣಚಿತ್ರಗಳಿರುವ ಪಟ್ಟಿಕೆಗಳು; ವೈವಿಧ್ಯಮಯ ಕಂಠಗಳು; ಗ್ರಂಥ, ಅರವ, ತಿಗಳಾರಿ, ಮೋಡಿ, ನಾಗರಿ, ತಮಿಳು, ತೆಲಗು ಲಿಪಿಯಲ್ಲಿರುವ ಹಸ್ತಪ್ರತಿಗಳು; ಕಡತ, ಸನ್ನದು, ನಿರೂಪಗಳು ಹೀಗೆ ವೈವಿಧ್ಯಮಯವಾದ ಹಸ್ತಪ್ರತಿಗಳು ಪ್ರತಿಷ್ಠಾನದ ಭಂಡಾರದಲ್ಲಿವೆ.



# ಗ್ರಂಥಾವಲೋಕನ

*(ಸೂಚನೆ : ಕಳೆದ ಸಂಚಿಕೆಯಲ್ಲಿ 'ಸಾದರಸ್ವೀಕಾರ' ವಿಭಾಗವನ್ನು ಆರಂಭಿಸಲಾಯಿತಾದರೂ ಕೇವಲ ಪುಸ್ತಕ ಪಟ್ಟಿಯನ್ನು ನೀಡುವುದರಿಂದ ಪ್ರಯೋಜನವಿಲ್ಲವೆಂಬ ಕಾರಣದಿಂದ ಹಿಂದಿನಿಂದ ಇದ್ದ ಈ ಗ್ರಂಥಾವಲೋಕನ ವಿಭಾಗದಲ್ಲೇ ಸಾದರಸ್ವೀಕಾರಕ್ಕಾಗಿ ಬರುವ ಗ್ರಂಥಗಳನ್ನು ಸಂಕ್ಷಿಪ್ತವಾಗಿ ಅವಲೋಕಿಸಲಾಗುವುದು.)*

### ೧. ಒಸರು ಬುಗ್ಗೆ (ಕವನ ಸಂಕಲನ) :

ಲೇಖಕರು : ಪ್ರೊ|| ಟಿ. ಕೇಶವಭಟ್ಟ, ಪುಟಗಳು : 108, ಬೆಲೆ : 50-00 ರೂ. ಪ್ರಕಾಶಕರು : ಚಿರಸಾಹಿತ್ಯ ಪ್ರಕಾಶನ, 758, 15ನೇ ಮುಖ್ಯರಸ್ತೆ, ಬನಶಂಕರಿ ಎರಡನೇ ಹಂತ, ಬೆಂಗಳೂರು-560 085

'ಒಸರು ಬುಗ್ಗೆ' ವೈಶಿಷ್ಟ್ಯ ಪೂರ್ಣ ಕವನ ಸಂಕಲನ. ವಿದ್ವಾಂಸ ಕೇಶವಭಟ್ಟರು ಯಕ್ಷಗಾನ ಕಲೆಯನ್ನು ಚೆನ್ನಾಗಿ ಬಲ್ಲ ಪರಿಣಿತರು. ಹಾಗೇ ವ್ಯಾಕರಣ, ಛಂದಸ್ಸು, ಅಲಂಕಾರ ಶಾಸ್ತ್ರಗಳನ್ನು ಕರತಲಾಮಲಕ ಮಾಡಿಕೊಂಡಿರುವ ಪಂಡಿತರು. ಕೃತಿಯ ಶೀರ್ಷಿಕೆ 'ಒಸರು ಬುಗ್ಗೆ' ಹಳಗನ್ನಡದ ಅಂತರ್ಜಲದಿಂದ ಇಂದಿನ ಹೊಸಗನ್ನಡದ ಕಾವ್ಯಾಭಿವ್ಯಕ್ತಿಯ ಕಾರಂಜಿ ಪುಟಿಯುವುದನ್ನು ನಿರ್ದೇಶಿಸುತ್ತದೆ. ಈ ಕೃತಿಯಲ್ಲಿ 43 ಕವನಗಳಿವೆ. ಆಧುನಿಕ ವಿಚಾರಧಾರೆ ಹಳಗನ್ನಡ ಛಂದಸ್ಸಿನಲ್ಲಿ ವಿಶಿಷ್ಟರೀತಿಯಲ್ಲಿ ಪ್ರತಿಮಿಸಿದೆ.

### ೨. ಅಪೂರ್ವ (ಪ್ರವಾಸ ಸಾಹಿತ್ಯ) :

ಲೇಖಕರು : ಪ್ರೊ|| ಕೆ. ಎಂ. ಸೀತಾರಾಮಯ್ಯ, ಪುಟಗಳು : 173, ಬೆಲೆ : 70 ರೂ., ಪ್ರಕಾಶಕರು : ಸುಜಾತ ಸಾಹಿತ್ಯ, 11, ವಸಿಷ್ಠ, ಸಿದ್ಧಿವಿನಾಯಕ ಲೇಔಟ್, ಬನಶಂಕರಿ 3ನೇ ಘಟ್ಟ, ಬೆಂಗಳೂರು-560 085

ಅಮೇರಿಕಾ ಪ್ರವಾಸದಲ್ಲಿ ಲೇಖಕರು ಕಂಡ ಅಪೂರ್ವ ದೃಶ್ಯಾವಳಿಗಳನ್ನು ರೋಚಕ ಶೈಲಿಯಲ್ಲಿ ಪ್ರಸ್ತುತಪಡಿಸಿದ್ದಾರೆ. ನಯಾಗರ ಜಲಪಾತ, ಲಿಬರ್ಟಿ ವಿಗ್ರಹ, ಲಿಬರ್ಟಿ ಬೆಲ್, ವಾಷಿಂಗ್‌ಟನ್ ಡಿ.ಸಿ.ಯ ವೈಶಿಷ್ಟ್ಯ, ನ್ಯೂಯಾರ್ಕ್ ನಗರದ ಐಸಿರಿ, ಗ್ರ್ಯಾಂಡ್ ಕ್ಯಾನ್ಯನ್ ಕಣಿವೆಗಳ ಅನುಪಮ ನೋಟ ಮುಂತಾದವುಗಳ ವರ್ಣನೆಯನ್ನು ಮನಮುಟ್ಟುವಂತೆ ವರ್ಣಿಸಿದ್ದಾರೆ. ಅಂಕಿ ಅಂಶಗಳನ್ನು ನೀಡಿದ್ದಾರೆ. ಕಥಾನಕ ಶೈಲಿಯ ನಿರೂಪಣೆ ಆಕರ್ಷಕವಾಗಿದೆ.

### ೩. ಪತಿ-ಪತ್ನಿ (ಸರಸ-ಸಲ್ಲಾಪ) :

ಸಂಪಾದಕರು : ಟಿ. ವಿ. ವೆಂಕಟರಮಣಯ್ಯ, ಪುಟಗಳು : 76, ಬೆಲೆ : 25/- ಪ್ರಕಟಣೆ : ಟಿ. ವಿ. ವೆಂಕಟರಮಣಯ್ಯ ಇ.ಡಬ್ಲ್ಯು.ಎಸ್. 218, ಕೆ. ಎಚ್. ಬಿ. ಕಾಲೋನಿ. 2ನೇ ಹಂತ, 5ನೇ ಕ್ರಾಸ್, ಬಸವೇಶ್ವರನಗರ, ಬೆಂಗಳೂರು-560 079.

ಗ್ರಂಥಾಲಯ ವಿಜ್ಞಾನದಲ್ಲಿ ವಿಶೇಷ ತರಬೇತಿ ಪಡೆದು ಹಲವು ವರ್ಷ ಗ್ರಂಥಾಲಯ ಇಲಾಖೆ ಮತ್ತು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಸೇವೆ ಸಲ್ಲಿಸಿ, ಸ್ವಯಂ ನಿವೃತ್ತಿ ಪಡೆದಿರುವ ಶ್ರೀ ವೆಂಕಟರಮಣಯ್ಯನವರು ಹಲವಾರು ಸಂಗ್ರಹ ಯೋಗ್ಯ, ಉಪಯುಕ್ತ ಪುಸ್ತಿಕೆಗಳನ್ನು ಪ್ರಕಟಿಸಿದ್ದಾರೆ. ಪ್ರಸ್ತುತ 'ಪತಿ-ಪತ್ನಿ'ಯಲ್ಲಿ, 'ನಗುವಿನಲ್ಲಿ, ಆತ್ಮವಿಶ್ವಾಸವಿದೆ. ನಗುವಿನಲ್ಲಿ ಬದುಕಿನ ಭರವಸೆ ಕಾಣುತ್ತದೆ. ಒಳ್ಳೆಯ ಮನಸ್ಸು, ಹೃದಯ ವೈಶಾಲ್ಯತೆ ರೂಪಿಸುವಲ್ಲಿ ಹಾಸ್ಯ ಪ್ರಜ್ಞೆ ಸಹಕಾರಿ. ದ್ವೇಷ, ಅಸೂಯೆ, ಆವೇಶಗಳನ್ನು ನಿಯಂತ್ರಿಸುವ ಹಾಸ್ಯಾಭಿರುಚಿ, ಮನಸ್ಸು, ದೇಹವನ್ನು ಆರೋಗ್ಯವಾಗಿಡುವ ಟಾನಿಕ್ ಎಂಬುದನ್ನು ಈ ಕೃತಿಯಲ್ಲಿ ಸರಸ-ಸಲ್ಲಾಪದ ನುಡಿಮುತ್ತುಗಳಾಗಿ ಪೋಣಿಸಿ ಸುಂದರಮಾಲೆಯನ್ನು ನೀಡಿರುತ್ತಾರೆ.

**೪. ಧರ್ಮಧ್ವಜ (ನಾಟಕ) :**

ಲೇಖಕರು : ಎಸ್. ಕೃಷ್ಣ ಸ್ವರ್ಣಸಂದ್ರ, ಪುಟಗಳು : 56, ಬೆಲೆ : 30/-, ಪ್ರಕಟಣೆ : ಕನ್ನಡ ಸಾಹಿತ್ಯ ಪರಿಷತ್ತು, ಮಂಡ್ಯ ತಾಲ್ಲೂಕು.

ರಾಷ್ಟ್ರೀಯ ಭಾವೈಕ್ಯತೆಯ ಮಹತ್ವವನ್ನು ಲೇಖಕರು ಈ ನಾಟಕದಲ್ಲಿ ಪ್ರಸ್ತುತಪಡಿಸಿದ್ದಾರೆ. ಫ್ಲಾಶ್‌ಬ್ಯಾಕ್ ತಂತ್ರ, ಸಣ್ಣವಾಕ್ಯಗಳ ಸಂಯೋಜನೆ, ಸರಸ ಸಂಭಾಷಣೆ ನಾಟಕದ ಆಶಯವನ್ನು ಸಮರ್ಥವಾಗಿ ನಿರ್ವಹಿಸಲು ಸಹಕಾರಿಗಳಾಗಿವೆ.

**೫. ಭದ್ರಮುಷ್ಟಿ (ಮಕ್ಕಳ ನಾಟಕ) :**

ಲೇಖಕರು : ಗಜಾನನ ಶರ್ಮ, ಪುಟಗಳು : 30, ಬೆಲೆ : 15/-, ಪ್ರಕಟಣೆ : ಪುಸ್ತಕ ಹೊಂಬಾಳೆ, ಕೆಳದಿ-577 401, ಶಿವಮೊಗ್ಗ.

'ಒಗ್ಗಟ್ಟಿನಲ್ಲಿ ಬಲವಿದೆ, ಒಮ್ಮತದಲ್ಲಿ ಒಲವಿದೆ' ಎಂಬುದನ್ನು ಲೇಖಕರು ಈ ಮಕ್ಕಳ ನಾಟಕದಲ್ಲಿ ಸಮರ್ಥ ರೀತಿಯಲ್ಲಿ ವ್ಯಕ್ತಪಡಿಸಿದ್ದಾರೆ. ಮಕ್ಕಳಿಗೆ ಆಡಲು ಅನುಕೂಲಕರವಾಗಿ ನಾಟಕ ಚಿಕ್ಕದಾಗಿದೆ. ನೀತಿಯಿದೆ. ಜೊತೆ ಜೊತೆಯಲ್ಲಿ ಇದು ರಂಜನೆಯನ್ನೂ ನೀಡುತ್ತದೆ. ಬೆರಳುಗಳ ಮೂಲಕ ಲೇಖಕರು ತಮ್ಮ ಆಶಯವನ್ನು ನಾಟಕ ಮಾಧ್ಯಮದಲ್ಲಿ ಹೊರಹೊಮ್ಮಿಸಿದ್ದಾರೆ.

**೬. ದೊಡ್ಡವರು (ವ್ಯಕ್ತಿಚಿತ್ರಗಳ ಸಂಕಲನ) :**

ಲೇಖಕರು : ಪ್ರೊ|| ಡಿ. ಲಿಂಗಯ್ಯ, ಪುಟಗಳು : 152, ಬೆಲೆ : 60/-, ಪ್ರಕಟಣೆ : ದಿನಕರ ಪ್ರಕಾಶನ, ನಂ. 690, 7ನೇ ಬ್ಲಾಕ್, 3ನೇ ಫೇಸ್, ಬನಶಂಕರಿ 2ನೇ ಹಂತ, ಬೆಂಗಳೂರು-560 085.

ಖ್ಯಾತ ಸಾಹಿತಿ ಪ್ರೊ|| ಡಿ. ಲಿಂಗಯ್ಯನವರು ತಮ್ಮ ಸಾಹಿತ್ಯ ಜೀವನದಲ್ಲಿ ವಿವಿಧ ಸಂದರ್ಭದಲ್ಲಿ ರಚಿಸಿರುವ ಹನ್ನೊಂದು ವ್ಯಕ್ತಿಗಳ ಕಿರುಚಿತ್ರಣವನ್ನು ಈ ಕೃತಿಯಲ್ಲಿ ನೀಡಿದ್ದಾರೆ. ವ್ಯಕ್ತಿಯ ಜೀವನ ಚರಿತ್ರೆಯನ್ನು ವಿಸ್ತೃತವಾಗಿ ಬರೆಯುವುದು ಸುಲಭ.

ಆದರೆ ಇಂತಹ ಕಿರುಚಿತ್ರವನ್ನು ನೀಡುವುದು ನಿಜಕ್ಕೂ ಕಷ್ಟದ ಕೆಲಸ. ವ್ಯಕ್ತಿಯ ಜೀವನ, ಸಾಧನೆಯನ್ನು ಭಟ್ಟಿ ಇಳಿಸಿ 'ಸಾರಸಂಗ್ರಹ'ವನ್ನು ಸಮರ್ಥರೀತಿಯಲ್ಲಿ ನೀಡಿರುತ್ತಾರೆ. 'ದೊಡ್ಡವರು' ಗ್ರಂಥದಲ್ಲಿ ಹನ್ನೊಂದು ವ್ಯಕ್ತಿಗಳ ಚಿತ್ರಗಳಿವೆ. ಈ ಹಿರಿಯರೆಲ್ಲಾ ತಂತಮ್ಮ ಕ್ಷೇತ್ರದಲ್ಲಿ ವಿಶಿಷ್ಟ ಸಾಧನೆ ಮಾಡಿ ಹೆಸರಾಗಿದ್ದಾರೆ. ಸಾಹಿತಿ ವಿದ್ವಾಂಸರು, ಸಮಾಜ ಸೇವಕರು, ರಾಜಕಾರಣಿಗಳು; ಕೃಷಿ ವಿಜ್ಞಾನಿಗಳು, ಸಾಂಸ್ಕೃತಿಕ ಪ್ರೇಮಿಗಳು ಈ ಪರಿಚಯ ಲೇಖನಗಳಿಗೆ ಕಾರಣರಾಗಿದ್ದಾರೆ. 60ಕ್ಕೂ ಹೆಚ್ಚು ಕೃತಿಗಳನ್ನು ಸಾರಸ್ವತ ಲೋಕಕ್ಕೆ ನೀಡಿರುವ ಪ್ರೊ।। ಡಿ. ಲಿಂಗಯ್ಯನವರ ಎರಡನೆ ವ್ಯಕ್ತಿಚಿತ್ರ ಸಂಗ್ರಹ 'ದೊಡ್ಡವರು'.

**೭. ಕನ್ನಡದ ಕಟ್ಟಾಳು ಕೃಷ್ಣರಾಯರು (ಲೇಖನಗಳ ಸಂಗ್ರಹ) :**

ಲೇಖಕರು : ಬಿ. ಎಸ್. ಕೇಶವರಾವ್, ಪುಟಗಳು : 67, ಬೆಲೆ : 80/-, ಪ್ರಕಟಣೆ : ಆದಿತ್ಯ ಪ್ರಕಾಶನ, 101/2, 'ರಾಜವಿಲ್ಲಾ' 22ನೇ ಮೇನ್, 11ನೇ ಕ್ರಾಸ್, ಬೆಂಗಳೂರು-560 070.

ಕನ್ನಡದ ಕಾದಂಬರಿ ಸಾಮ್ರಾಟ್ 'ಅ.ನ.ಕೃ.'ರವರನ್ನು ನಿಕಟವಾಗಿ ಬಲ್ಲ ಶ್ರೀ ಬಿ. ಎಸ್. ಕೇಶವರಾವ್‌ರವರು ಕನ್ನಡದ ಕಟ್ಟಾಳುವಿನ ಬಗ್ಗೆ ಆತ್ಮೀಯ ಚಿತ್ರಣ ನೀಡಿರುತ್ತಾರೆ. ಈ ಲೇಖನಗಳಲ್ಲಿ ಸ್ಪಷ್ಟತೆಯಿದೆ. ನಿಖರತೆಯಿದೆ. ಅನುಭವದ ಸ್ನಿಗ್ಧ ಹಿನ್ನೆಲೆಯಿದೆ. ಆದ್ದರಿಂದಲೇ ಲೇಖನಗಳು ಸೊಗಸಾಗಿ ಮೂಡಿಬಂದಿವೆ.

ಅ.ನ.ಕೃ. ಪ್ರಚಂಡ ಮಾತುಗಾರ, ಶ್ರೇಷ್ಠ ಕಾದಂಬರಿಕಾರ, ವರ್ಚಸ್ವೀ ಯುಗಪುರುಷ. ಸಾಹಿತ್ಯ ಕ್ಷೇತ್ರದಲ್ಲಿ ಮರೆಯಲಾರದ ವ್ಯಕ್ತಿ. ಇವರ ಘನವ್ಯಕ್ತಿತ್ವ ನಿಖರವಾಗಿ ಇಲ್ಲಿ ಮೂಡಿಬಂದಿದೆ.

**೮. 'ಮುಕ್ತ ಚಂದ' (ಶಾಂತಿನಾಥ ದೇಸಾಯಿ ನೆನಪಿನ ಸಂಪುಟ) :**

ಸಂಪಾದಕರು : ಡಿ. ವಿ. ಪ್ರಹ್ಲಾದ್, ಪುಟಗಳು : 152, ಬೆಲೆ : 85/-, ಪ್ರಕಟಣೆ : 'ಸಂಚಯ', 108, 2ನೇ ಮೇನ್, 6ನೇ ಬ್ಲಾಕ್, 2ನೇ ಹಂತ, 2ನೇ ಘಟ್ಟ, ಬನಶಂಕರಿ, ಬೆಂಗಳೂರು-560 085.

ಕಾದಂಬರಿ, ಕಥೆ, ಸಂಪಾದನೆ, ವಿಮರ್ಶಾ ಕ್ಷೇತ್ರದಲ್ಲಿ ಕೃಷಿ ಮಾಡಿ ಸಮೃದ್ಧ ಬೆಳೆಯನ್ನು ಬೆಳೆದು ಜನಮನವನ್ನು ಗೆದ್ದಿರುವ ಡಾ।। ಶಾಂತಿನಾಥ ದೇಸಾಯಿಯವರ ಜೀವನ-ಸಾಧನೆಗಳ ಕಿರುನೋಟವನ್ನು ನೀಡುವ ಈ ಕೃತಿ ವೈಶಿಷ್ಟ್ಯಪೂರ್ಣವಾಗಿದೆ. ರಾಜ್ಯದ ಹೆಸರಾಂತ ಲೇಖಕರಾದ ಜಯಂತಕಾಯ್ಕಿಣಿ, ಕೆ. ವಿ. ತಿರುಮಲೇಶ, ಪಿ. ಲಂಕೇಶ್, ಡಾ।। ಸುಮತೀಂದ್ರ ನಾಡಿಗ, ಡಾ।। ಜಿ. ಎಸ್. ಆಮೂರ, ಯಶವಂತ ಚಿತ್ತಾಲ, ಡಾ।। ಕೆ. ವಿ. ನಾರಾಯಣ, ಡಾ।। ಹೆಚ್. ಎಸ್. ರಾಘವೇಂದ್ರರಾವ್, ರಹಮತ್ ತರೀಕೆರೆ ಮುಂತಾದವರು ದೇಸಾಯಿಯವರ ವ್ಯಕ್ತಿತ್ವ ಹಾಗೂ ಕೃತಿ ಕುರಿತು

ತಮ್ಮ ಅನಿಸಿಕೆಗಳನ್ನು ಹಂಚಿಕೊಂಡಿದ್ದಾರೆ. ಸಂಪಾದಕ ಡಿ. ವಿ. ಪ್ರಹ್ಲಾದ್ ಈ ಕೃತಿಯನ್ನು ಸಂಕಲಿಸಿ ಸಾರಸ್ವತ ಲೋಕಕ್ಕೆ ಉತ್ತಮ ಕೊಡುಗೆಯನ್ನು ನೀಡಿದ್ದಾರೆ.

**೯. ಕರ್ನಾಟಕ ಭೂಷಣ (ಕೌಜಲಗಿ ಶ್ರೀನಿವಾಸರಾವ್ ಜೀವನ ಚಿತ್ರ) :**

ಲೇಖಕರು : ಹಣಮಂತ ತಾಸಗಾಂವಕರ, ಪುಟಗಳು : 36, ಬೆಲೆ : 18/-, ಪ್ರಕಟಣೆ : 'ಪುಸ್ತಕ ಶಕ್ತಿ', 103, 3ನೇ ಮುಖ್ಯರಸ್ತೆ, ಟಾಟಾಸಿಲ್ಕ್‌ಫಾರಂ, ಬಸವನಗುಡಿ, ಬೆಂಗಳೂರು-560 004.

ಆದರ್ಶ ವ್ಯಕ್ತಿಗಳ ಸಂಖ್ಯೆ ಕ್ಷೀಣಿಸುತ್ತಿರುವ ಈ ದಿನಗಳಲ್ಲಿ ಕೌಜಲಗಿ ಶ್ರೀನಿವಾಸರಾವ್ ಅಂತಹ ನಿಸ್ಪೃಹ ವ್ಯಕ್ತಿತ್ವದ ಆದರ್ಶವಾದಿ ಸ್ವಾತಂತ್ರ್ಯ ಹೋರಾಟದಲ್ಲೆ ಜೀವನವನ್ನು ತಣಿಸಿದ ಧೀಮಂತ ನಾಯಕರು ದೊರೆತಿರುವುದು ಕರ್ನಾಟಕದ ಭಾಗ್ಯವೆನ್ನಬೇಕು. ಕೌಜಲಗಿಯವರು ರಾಷ್ಟ್ರಭಕ್ತಿಗೆ ಆದರ್ಶ ಜೀವನಕ್ಕೆ ಮಾದರಿಯಾಗಿದ್ದಾರೆ. ಕರ್ನಾಟಕಕ್ಕೆ ಭೂಷಣರಾಗಿ ಬಾಳಿ ಆಳಿದ ಈ ಪ್ರಾತಃಸ್ಮರಣೀಯರ ಸೇವಾ ಕೈಂಕರ್ಯ ಅನುಕರಣೀಯವಾಗಿದೆ. ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ಹೊಸ ಆಯಾಮ ನೀಡಿದುದಲ್ಲದೆ ಕರ್ನಾಟಕ ಏಕೀಕರಣ, ಸೇವಾದಳದ ಬೆಳವಣಿಗೆ ಮುಂತಾದ ಕಾರ್ಯಚಟುವಟಿಕೆಗಳಿಗೇ ಜೀವನವನ್ನು ಮುಡುಪಾಗಿರಿಸಿದ್ದ ಕೌಜಲಗಿಯವರು ಇಂದಿನ ಪೀಳಿಗೆಗೆ ದಾರಿದೀಪವಾಗಿದ್ದಾರೆ. ಲೇಖಕರು ಇವರನ್ನು ಸ್ತುತ್ಯರ್ಹ ರೀತಿಯಲ್ಲಿ ಈ ಕೃತಿಯಲ್ಲಿ ಪರಿಚಯಿಸಿದ್ದಾರೆ.

**– ಸಂಪಾದಕರು**

**೧೦. ಸೂಕ್ತಿ ಸಂಕಲನಗಳು :**

***೧. 'ಹುಟ್ಟು-ಸಾವು' ೨. ಗ್ರಂಥ-ಗ್ರಂಥಾಲಯ ವಾಚನ.***

ಸಂಪಾದಕರು ಮತ್ತು ಪ್ರಕಾಶಕರು : ಟಿ. ವಿ. ವೆಂಕಟರಮಣಯ್ಯ, ಇ.ಡಬ್ಲ್ಯು.ಎಸ್.-218, ಕೆ.ಎಚ್.ಬಿ. ಕಾಲೋನಿ 2ನೇ ಹಂತ, 5ನೇ ಕ್ರಾಸು, ಬಸವೇಶ್ವರನಗರ, ಬೆಂಗಳೂರು-560 079.

ಟಿ. ವಿ. ವೆಂಕಟರಮಣಯ್ಯನವರ ಸೂಕ್ತಿ ಸಂಗ್ರಹದ ಮುಂದುವರೆದ ಆಸಕ್ತಿಯ ಫಲವಾಗಿ, ಅವರು ಸಂಪಾದಿಸಿದ ಮತ್ತೆರಡು ಕೃತಿಗಳು ಸಹೃದಯರ ಕೈಯಲ್ಲಿವೆ. ಗ್ರಂಥ-ಗ್ರಂಥಾಲಯ-ವಾಚನ. ಈ ವಿಷಯಕ್ಕೆ ಸಂಬಂಧಪಟ್ಟಂತೆ ಒಂದು. ಹುಟ್ಟು-ಸಾವು ಈ ವಿಷಯಕ್ಕೆ ಸಂಬಂಧಪಟ್ಟಂತೆ ಇನ್ನೊಂದು. ಮೊದಲನೆಯದು ಪರಸ್ಪರ ಸಂಬಂಧವುಳ್ಳ ಮೂರು ವಿಷಯಗಳ ಸೂಕ್ತಿಯನ್ನು ಒಳಗೊಂಡಿದ್ದರೆ, ಎರಡನೆಯದು ಪರಸ್ಪರ ವಿರುದ್ಧವಾದ ಎರಡು ವಿಷಯಗಳ ಸೂಕ್ತಿಗಳಿಂದ ಕೂಡಿದೆ. ಈ ರೀತಿಯ ಸುಮಾರು 50 ಪುಸ್ತಕಗಳನ್ನು ಸಂಪಾದಿಸಿರುವ ಟಿ.ವಿ.ವಿ.ಯವರ ಶ್ರಮ, ಓದುವ, ಸಂಗ್ರಹಿಸುವ ಆಸಕ್ತಿ ಮತ್ತು ಪ್ರೀತಿ ಒಂದು ಕ್ಷಣ ಓದುಗನನ್ನು ಚಿಂತನೆಗೆ ಹಚ್ಚುತ್ತವೆ ಮತ್ತು ಅವರ ಗ್ರಂಥಾಸಕ್ತಿ, ಸಾಧನೆಯ ಬಗ್ಗೆ ಗೌರವ ಮೂಡಿಸುತ್ತವೆ.

ಈ ಎರಡೂ ಕೃತಿಗಳಲ್ಲಿ ಬೇರೆ ಬೇರೆ ದೇಶಗಳು ಮಹಾಕೃತಿಗಳು, ಮಹಾಕಾವ್ಯಗಳು ಮತ್ತು ಘನ ವಿದ್ವಾಂಸರ ಕೃತಿಗಳಲ್ಲಿ ಅಲ್ಲಲ್ಲಿ ಚೆಲ್ಲಿರುವ ಮುತ್ತುಗಳನ್ನು ಒಂದೆಡೆ ಸೇರಿಸಿ ಸುಂದರ ಹಾರವನ್ನು ಕಟ್ಟಿ ನಮ್ಮ ಕೈಯಿಗಿತ್ತಿದ್ದಾರೆ. ಆದ್ದರಿಂದ ಎರಡೂ ಕೃತಿಗಳು ಉತ್ತಮ ಪರಾಮರ್ಶನ ಹೊತ್ತಿಗೆಗಳಾಗಿವೆ. ಇವುಗಳಲ್ಲಿ ಜಾನಪದ ಕ್ಷೇತ್ರದಿಂದಲೂ ಸಂಗ್ರಹಿಸಿದ ನುಡಿಗಟ್ಟುಗಳು ಇರುವುದರಿಂದ ಗಮನಿಸಬೇಕಾದ ಅಂಶವಾಗಿದೆ.

ಎರಡೂ ಕೃತಿಗಳೂ ಅಧ್ಯಯನದ ಓದಿಗೂ, ಸ್ವಾರಸ್ಯಕರ ಓದಿಗೂ ಸಲ್ಲುತ್ತವೆ. 'ಸತ್ತವನ ಮುಕ್ಕಿ ಎತ್ತ ಬಿದ್ದರೇನು' ಮತ್ತು 'ಸತ್ತವನ ತಿಕ ಅತ್ಲೊ ಇತ್ಲೊ' ಎಂಬ ಈ ನುಡಿಗಟ್ಟುಗಳು (ಪು.43). ಜಾನಪದ ಅಧ್ಯಯನಕ್ಕೆ ಬೇಕಾದ ಭಿನ್ನ ಪಾಠಗಳನ್ನು ಒದಗಿಸುತ್ತವೆ. ಸಿ.ಪಿ.ಕೆ.ಯವರ 'ಗ್ರಂಥಾಲಯದಲ್ಲಿ' ಮತ್ತು ಎಡ್ವರ್ಡ್‌ಹೈಟ್‌ನ ಅನುವಾದಿತ ಕವನ "ಜ್ಞಾನಸೂರ್ಯ" ಕಿರುಗವಿತೆಗಳು ಗಮನ ಸೆಳೆಯುತ್ತವೆ. 'ಸತ್ತ ಶವಕ್ಕೆ ಯಾಕೆ ಶೃಂಗಾರ (ಪು. 43), ಉತ್ತು ಬರುವವನಿಗೆ ಯಾಕೆ ನಡೆಮುಡಿ (ಪು.43)' ಯಂತಹ ಸೀಮಿತಾರ್ಥದ ನುಡಿಗಟ್ಟುಗಳು ಗೊಂದಲವನ್ನು ಹುಟ್ಟಿಸುತ್ತವೆ. (ಪು.43)

ಮನೆ ಮನೆಗಳಲ್ಲಿಯೂ, ಗ್ರಂಥಾಲಯಗಳಲ್ಲಿಯೂ ಇರಬೇಕಾದ ಈ ಕಿರುಕೃತಿಗಳನ್ನು ಸಂಪಾದಿಸಿದ ಟಿ.ವಿ.ವಿ.ಯವರ ಪರಿಶ್ರಮ ಮೆಚ್ಚುವಂಥಾದ್ದು. ಈ ಕೃತಿಗಳಲ್ಲಿ ಸೂಕ್ತಿ, ಗಾದೆ, ನುಡಿಗಟ್ಟುಗಳನ್ನು ಅಕಾರಾದಿಯಾಗಿ ಮತ್ತು ವಿಷಯವಾರು ಜೋಡಿಸಿಲ್ಲದಿರುವುದು ಸೂಕ್ತವಾಗಿದೆ. ಗ್ರಂಥಾಲಯತಜ್ಞರಾಗಿರುವ ವೆಂಕಟರಮಣಯ್ಯನವರ ಮೂಲಕ ಇನ್ನೂ ಹೆಚ್ಚು ಹೆಚ್ಚು ಮಾಹಿತಿ ವಿಜ್ಞಾನದ ಗ್ರಂಥಗಳು ಹೊರಬರುವಂತಾಗಲಿ.

**-ಸತ್ಯನಾರಾಯಣ ಬಿ. ಆರ್.**



## ಬಿ.ಎಂ.ಶ್ರೀ ಕಲಾಭವನಕ್ಕೆ ಅಪೇಕ್ಷಿತ ನೆರವು : ಪ್ರೊ|| ಎಂ. ಆರ್. ದೊರೆಸ್ವಾಮಿ ಭರವಸೆ

'ಪ್ರಸಿದ್ಧ ಸಾಹಿತಿಗಳೂ ನನ್ನ ಗುರುಗಳೂ ಆಗಿದ್ದ ಪ್ರೊ|| ಎಂ. ವಿ. ಸೀತಾರಾಮಯ್ಯನವರು ಕಟ್ಟಿ ಬೆಳೆಸಿದ ಈ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಸಾಹಿತ್ಯ ಕ್ಷೇತ್ರದಲ್ಲಿ ಧ್ರುವತಾರೆಯಾಗಿರುವಂತೆ, ಅವರು ಹರಸಿ ಹಾರೈಸಿದ ನಮ್ಮ ಶಿಕ್ಷಣ ಸಂಸ್ಥೆ ಶಿಕ್ಷಣ ಕ್ಷೇತ್ರದಲ್ಲಿ ಧ್ರುವತಾರೆಯಾಗಿ ಬೆಳೆಯುತ್ತಿದೆ. ನಾಡಿಗೆ ಹೆಮ್ಮೆ ತರುವಂತಹ ಈ ಸಂಸ್ಥೆ ನಮ್ಮ ಬಡಾವಣೆಯಲ್ಲಿರುವುದು ಒಂದು ಹೆಮ್ಮೆ. ಪ್ರತಿಷ್ಠಾನದ ಕಟ್ಟಡವಾದ "ಬಿ.ಎಂ.ಶ್ರೀ ಕಲಾಭವನ"ಕ್ಕೆ ಯಾವ ರೀತಿಯ ನೆರವನ್ನು ಅಪೇಕ್ಷಿಸಿದರೂ ಅದನ್ನು ನೆರವೇರಿಸುವೆ' ಎಂದು ಪಿ.ಇ.ಎಸ್. ಶಿಕ್ಷಣ ಸಂಸ್ಥೆಯ ಸಂಸ್ಥಾಪಕ ಕಾರ್ಯದರ್ಶಿ ಪ್ರೊ|| ಎಂ. ಆರ್. ದೊರೆಸ್ವಾಮಿ ಆಶ್ವಾಸನೆ ನೀಡಿದರು.

ಪ್ರತಿಷ್ಠಾನದಲ್ಲಿ ದಿನಾಂಕ 20-2-2001ರಂದು ಬಿ.ಎಂ.ಶ್ರೀ ಪ್ರತಿಷ್ಠಾನದ 2000ನೇ ಸಾಲಿನ "ಸಾವಿತ್ರಮ್ಮ ದತ್ತಿ ಸಾಹಿತ್ಯ ಪ್ರಶಸ್ತಿ"ಯನ್ನು ಮಹಿಳಾ ಸೃಜನೇತರ ಸಾಹಿತ್ಯ ಕೃತಿಯಾದ "ದೇವಾಲಯ ವಾಸ್ತುಶಿಲ್ಪ ಪರಿಚಯ" ಗ್ರಂಥದ ಕರ್ತೃ ಕೂ. ಸ. ಅಪರ್ಣ ಅವರಿಗೆ ಪ್ರದಾನ ಮಾಡಿ ಅವರು ಮಾತನಾಡುತ್ತಿದ್ದರು.

'ದೇವಾಲಯ ವಾಸ್ತುಶಿಲ್ಪ' ಉತ್ತಮ ಕೃತಿಯಾಗಿದ್ದು, ತೀರ್ಪುಗಾರರ ಆಯ್ಕೆ ಸಮಂಜಸವಾಗಿದೆ. ಮಹಿಳೆಯರು ಈ ಬಗೆಯ ಸಂಶೋಧನಾ ಪಾಂಡಿತ್ಯ ಕ್ಷೇತ್ರಗಳಲ್ಲೂ ತೊಡಗಿಸಿಕೊಳ್ಳುತ್ತಿರುವುದು ಈ ಪ್ರಶಸ್ತಿಯ ದಾನಿಗಳಾದ ಪ್ರೊ|| ಎಂ. ವಿ. ಸೀತಾರಾಮಯ್ಯನವರ ಆಶಯಕ್ಕೆ ಅನುಗುಣವಾಗಿದೆ ಎಂದರು.

ಒಂದು ಸಾವಿರ ರೂ. ನಗದು ಹಾಗೂ ಪ್ರಶಸ್ತಿ ಪತ್ರವನ್ನೊಳಗೊಂಡ ಈ ಪ್ರಶಸ್ತಿಯನ್ನು ಸ್ವೀಕರಿಸಿದ ಅಪರ್ಣಾ ಅವರು ಕಿರಿಯಳಾದ ತನಗೆ ನೀಡಿದ ಈ ಪ್ರಶಸ್ತಿಯಿಂದ ತನ್ನಲ್ಲಿ ಮತ್ತಷ್ಟು ಸಂಶೋಧನಾ ಪ್ರಜ್ಞೆಯನ್ನು ಬೆಳೆಸಿದೆ ಎಂದು ಕೃತಜ್ಞತೆ ವ್ಯಕ್ತಮಾಡಿದರು.

ಇದೇ ಸಂದರ್ಭದಲ್ಲಿ ಎಂ. ಎ. ಜಯಚಂದ್ರ ಸ್ಮಾರಕ ದತ್ತಿ ಉಪನ್ಯಾಸ ನೀಡಿದ ಮೈಸೂರಿನ ಪ್ರೊ|| ಶುಭಚಂದ್ರ ಅವರು "ಸಂಸ್ಕೃತ, ಪ್ರಾಕೃತ ಮತ್ತು ಕನ್ನಡ ಭಾಷೆಯಲ್ಲಿರುವ ಜೈನ ಸಾಹಿತ್ಯ ಕೃತಿಗಳ ಹಿರಿಮೆಯನ್ನು ಪರಿಚಯಿಸಿದರು. ಇಡೀ ಭಾರತೀಯ ಜೈನ ಸಾಹಿತ್ಯಕ್ಕೆ ಕರ್ನಾಟಕದ ಅದರಲ್ಲೂ ಕನ್ನಡ ಭಾಷೆಯಲ್ಲಿರುವ ಜೈನ ಕೃತಿಗಳೇ ಪ್ರಮಾಣಗಳಾಗಿವೆ ಮತ್ತು ಮೂಲಕೃತಿಗಳಾಗಿವೆ ಎಂದು ಅವರು ತಿಳಿಸಿದರು.

ಅಧ್ಯಕ್ಷತೆ ವಹಿಸಿದ್ದ ನಿಟ್ಟೂರು ಶ್ರೀನಿವಾಸರಾವ್ ಮಾತನಾಡಿ ಕೇವಲ ಇಪ್ಪತ್ತು ವರ್ಷಗಳಲ್ಲಿ ಪಿ.ಇ.ಎಸ್. ಶಿಕ್ಷಣ ಸಂಸ್ಥೆಯನ್ನು ದೇಶದಲ್ಲೇ ಒಂದು ಉತ್ತಮ ಹಾಗೂ ಬೃಹತ್ ಶೈಕ್ಷಣಿಕ ಕೇಂದ್ರವನ್ನಾಗಿ ಬೆಳೆಸಿದ ಪ್ರೊ|| ಎಂ. ಆರ್. ದೊರೆಸ್ವಾಮಿ ಅವರ ಕರ್ತೃತ್ವ ಶಕ್ತಿಯನ್ನು ಪ್ರಶಂಸಿಸಿದರು. ಗ್ರಾಮಾಂತರ ಪ್ರದೇಶಗಳ ಅನೇಕ ಪ್ರಾಥಮಿಕ ಶಿಕ್ಷಣ ಸಂಸ್ಥೆಗಳನ್ನು ದತ್ತು ಸ್ವೀಕಾರ ಮಾಡಿ ಗ್ರಾಮೀಣ ವಿದ್ಯಾಭಿವೃದ್ಧಿಗೆ ಶ್ರಮಿಸುತ್ತಿರುವ ಅವರ ಉದಾರಗುಣವನ್ನು ಮೆಚ್ಚಿ, ಇವರ ಸೇವೆ ರಾಜ್ಯಕ್ಕೆ ಹೆಚ್ಚು ಲಭಿಸುವಂತಾಗಲಿ ಎಂದು ಆಶಿಸಿದರು.

ಕೂ.ಸ.ಅಪರ್ಣ ಅವರಿಗೆ ಪ್ರಶಸ್ತಿ ಸಂದುದು ಅರ್ಥಪೂರ್ಣವಾಗಿದ್ದು, ದಾನಿಗಳ ಉದ್ದೇಶ ಸಾರ್ಥಕವಾಗಿದೆ ಎಂದರಲ್ಲದೆ ಪ್ರೊ|| ಶುಭಚಂದ್ರ ಅವರ ಈ ಅಪಾರ ಪಾಂಡಿತ್ಯಪೂರ್ಣ ಉಪನ್ಯಾಸವು ಲೇಖನರೂಪದಲ್ಲಿ ಹೊರಹೊಮ್ಮಲಿ ಎಂದು ಆಶಿಸಿದರು.

ಜಯ ಪಾರ್ಥಸಾರಥಿ ಅವರ ಕನ್ನಡ ಗೀತೆಯೊಂದಿಗೆ ಪ್ರಾರಂಭವಾದ ಈ ಕಾರ್ಯಕ್ರಮದಲ್ಲಿ ಮೊದಲಿಗೆ ವ್ಯವಸ್ಥಾಪಕ ಕಾರ್ಯದರ್ಶಿ ಪ್ರೊ|| ಡಿ. ಲಿಂಗಯ್ಯ ಸ್ವಾಗತಿಸಿದರು. ಇನ್ನೊಬ್ಬ ವ್ಯವಸ್ಥಾಪಕ ಕಾರ್ಯದರ್ಶಿ ಪ್ರೊ|| ಕೆ. ಆರ್. ಇಕ್ಬಾಲ್ ಅಹಮದ್ ಅತಿಥಿಗಳನ್ನು ಪರಿಚಯಿಸಿದರು. ಅಧ್ಯಕ್ಷ ಎನ್. ಬಸವಾರಾಧ್ಯ ಕಡೆಯಲ್ಲಿ ವಂದಿಸಿದರು. ಗೌರವ ಕಾರ್ಯದರ್ಶಿ ಪ್ರೊ|| ನಾ. ಗೀತಾಚಾರ್ಯ ಕಾರ್ಯಕ್ರಮ ನಿರೂಪಿಸಿದರು. ✤

## ತಿದ್ದುಪಡಿ

ಕಳೆದ ಸಂಚಿಕೆಯಲ್ಲಿ ಅಕಸ್ಮಾತ್ತಾಗಿ ಸಂಭವಿಸಿರುವ ಈ ಕೆಳಕಂಡ ದೋಷಗಳನ್ನು ದಯವಿಟ್ಟು ತಿದ್ದಿಕೊಳ್ಳಬೇಕಾಗಿ ವಿನಂತಿ.

*(ಕರ್ನಾಟಕ ಲೋಚನ - ದ್ವಿದಶಮಾನೋತ್ಸವ ವಿಶೇಷಾಂಕ ೧೨-೨ ಮತ್ತು ೧೩-೧, ೨; ಡಿಸೆಂಬರ್-೯೯; ಜೂನ್-ಡಿಸೆಂಬರ್-೨೦೦೦)*

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೧೧೬ | (ಕೊನೆಯಿಂದ) ೩ | ಎಂ. ಜಿ. ಹೆಗಡೆ | ಶ್ರೀಕೃಷ್ಣಭಟ್ ಅರ್ತಿಕಜೆ<br>ಎಂ. ಜಿ. ಹೆಗಡೆ |
| ೧೧೭ | ೯ | ಎಸ್. ರಾಮಸ್ವಾಮಿ | ಬಿ. ರಾಮಸ್ವಾಮಿ |
| ೧೩೧ | (ಕೊನೆಯಿಂದ) ೪ | ಬಿ. ಎಸ್. ರಾಮಪ್ರಸಾದ್ | ಎಂ. ಎಸ್. ರಾಮಪ್ರಸಾದ್ |
| ೧೪೧ | ೧ | ಟಿ. ಎನ್. ರಾಮರಾವ್ | ಟಿ. ಎನ್. ಶಾಮರಾವ್ |

*- ಸಂಪಾದಕರು*

## ಬಿ.ಎಂ.ಶ್ರೀ ಸ್ಮರಣೆ ನಿರಂತರವಾಗಲಿ; ಹುಟ್ಟೂರಿನ ಕಾರ್ಯಕರ್ತರಿಗೆ ಕರೆ

ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕು ಬೆಳ್ಳೂರಿನ (ಹುಟ್ಟೂರು) ಆಚಾರ್ಯ ಬಿ.ಎಂ.ಶ್ರೀ ಶತಮಾನಭವನದಲ್ಲಿ ಜನವರಿ 3 ಸಂಜೆ ನಡೆದ ಬಿ.ಎಂ.ಶ್ರೀ ಜನ್ಮದಿನಾಚರಣೆ ಕಾರ್ಯಕ್ರಮದಲ್ಲಿ ಪ್ರಸಿದ್ಧ ಸಾಹಿತಿ ಎಸ್. ವಿ. ಶ್ರೀನಿವಾಸರಾವ್ ಅವರು ನವಸಹಸ್ರಮಾನದಲ್ಲಿ ಕನ್ನಡಕ್ಕೆ ಹೊಸ ಹುಟ್ಟು ನೀಡಿದ ಆಚಾರ್ಯ ಬಿ.ಎಂ.ಶ್ರೀ ಯವರ ಜೀವನ ಸಾಧನೆ ಪರಿಚಯಿಸುತ್ತ ಶ್ರೀಯವರ ಸ್ಮರಣೆ ನಿರಂತರವಾಗಿ ನಡೆಯುವಂತೆ ಸ್ಥಳೀಯ ಕಾರ್ಯಕರ್ತರು ಆಸ್ಥೆ ವಹಿಸಬೇಕೆಂದು ಕರೆಕೊಟ್ಟರು. ಶ್ರೀಯವರ ಬಂಧುಗಳಾದ ಎನ್. ಎಸ್. ಕೃಷ್ಣಸ್ವಾಮಿ ತಮ್ಮ ಅನುಭವಗಳನ್ನು ಮೆಲಕು ಹಾಕಿದರು.

ಕೆನರಾಬ್ಯಾಂಕ್‌ನ ವ್ಯವಸ್ಥಾಪಕ ಎನ್. ಎಸ್. ಶಾಸ್ತ್ರೀ ಅವರು ಕಾರ್ಯಕ್ರಮ ಉದ್ಘಾಟನೆ ಮಾಡುತ್ತ ಶ್ರೀಯವರ ಹೆಸರಿನಲ್ಲಿ ನಡೆಯುವ ಸ್ಪರ್ಧೆ ಯುವ ಪೀಳಿಗೆಯಲ್ಲಿ ನಾಡು ನುಡಿಯ ಅಭಿಮಾನ ಮೂಡಿಸಲು ನೆರವಾಗುತ್ತದೆ ಎಂದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಬಿ.ಎಂ.ಶ್ರೀ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಪ್ರೊ. ನಾ. ಗೀತಾಚಾರ್ಯ ಅವರು ಪ್ರತಿಷ್ಠಾನ ಹುಟ್ಟೂರಿನಲ್ಲಿ ಸ್ಥಾಪಿಸಿರುವ ಈ ಸ್ಮಾರಕವನ್ನು ಸ್ಥಳೀಯರು ಸದುಪಯೋಗಪಡಿಸಿಕೊಂಡು ಇದರ ಪುರೋಭಿವೃದ್ಧಿಗೆ ನೆರವಾಗಬೇಕೆಂದು ಕರೆಕೊಟ್ಟರು.

ಸ್ಥಾನಿಕ ಸಮಿತಿ ಕಾರ್ಯಾಧ್ಯಕ್ಷ ಎಸ್. ಕೃಷ್ಣಮೂರ್ತಿ ಸ್ವಾಗತ ಕೋರಿದರು. ಸುನಿಲ್ ವಂದನಾರ್ಪಣೆ ಮಾಡಿದರು. ಸೋಮಸುಂದರ್ ಅವರು ಕಾರ್ಯಕ್ರಮ ನಿರೂಪಿಸಿದರು. ಕೊನೆಯಲ್ಲಿ ಸ್ಥಳೀಯ ಕಲಾವಿದರು ಮತ್ತು ವಿದ್ಯಾರ್ಥಿಗಳು ಬಿ.ಎಂ.ಶ್ರೀ ಭಾವಗೀತೆಗಳನ್ನು ಹಾಡಿ ಕಾರ್ಯಕ್ರಮಕ್ಕೆ ಮೆರಗು ನೀಡಿದರು.

**ಪ್ರತಿಮೆಗೆ ಮಾಲಾರ್ಪಣೆ**

ಬೆಂಗಳೂರಿನ ನ್ಯಾಷನಲ್ ಕಾಲೇಜು ವೃತ್ತದಲ್ಲಿರುವ ಬಿ.ಎಂ.ಶ್ರೀ ಪ್ರತಿಮೆಗೆ ಜನವರಿ 3ರಂದು ಪ್ರತಿಷ್ಠಾನದ ಅಧ್ಯಕ್ಷ ಎನ್. ಬಸವಾರಾಧ್ಯ ಅವರು ಮಾಲಾರ್ಪಣೆ ಮಾಡಿ ಬಿ.ಎಂ.ಶ್ರೀ ಅವರ ಆದರ್ಶ ಈ ನವ ಯುಗದಲ್ಲಿ ಕನ್ನಡಿಗರಲ್ಲಿ ಪ್ರಜ್ವಲಿಸಲಿ ಎಂದು ಆಶಿಸಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಎನ್. ಎಸ್. ರಾಮಸ್ವಾಮಿ ಅಯ್ಯರ್ ಅವರು ಬಿ.ಎಂ.ಶ್ರೀ ಅವರೊಂದಿಗಿನ ನೆನಪುಗಳನ್ನು ಹಂಚಿಕೊಂಡರು.

ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ನಾ. ಗೀತಾಚಾರ್ಯ ಅವರು ಕಾರ್ಯಕ್ರಮ ನಿರೂಪಣೆ ಮಾಡಿ ಬಿ.ಎಂ.ಶ್ರೀ ಅವರನ್ನು ಕುರಿತು ರಚಿಸಿದ್ದ ಸ್ವರಚಿತ ಕವಿತೆಯನ್ನು ವಾಚನ ಮಾಡಿದರು. ಇದೇ ಸಂದರ್ಭದಲ್ಲಿ ನಾಗಮಂಗಲ ನಿವಾಸಿಗಳ ಸಂಘದ ವತಿಯಿಂದ ಜಿ. ಎಸ್. ಶಿವಲಿಂಗಯ್ಯ ಅವರೂ ಪ್ರತಿಮೆಗೆ ಮಾಲಾರ್ಪಣೆ ಮಾಡಿದರು.

ಕೃಪೆ : **ಬಹುಜನ ಕನ್ನಡಿಗರು,** 1-2-2001

## ಬಿ.ಎಂ.ಶ್ರೀ, ಕಾಳಿಂಗರಾವ್ ಸ್ಮಾರಕ ಸುಗಮ ಸಂಗೀತ ಸ್ಪರ್ಧೆ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ನೂತನವಾಗಿ ನಿರ್ಮಿಸಿರುವ ಬಿ.ಎಂ.ಶ್ರೀ ಕಲಾಭವನದಲ್ಲಿ ಕಾಳಿಂಗರಾವ್ ಬಳಗದ ಸಹಕಾರದೊಂದಿಗೆ ಬಿ.ಎಂ.ಶ್ರೀ ಮತ್ತು ಪಿ. ಕಾಳಿಂಗರಾವ್ ಸ್ಮಾರಕ ಅಖಿಲ ಕರ್ನಾಟಕ ಸುಗಮ ಸಂಗೀತ ಸ್ಪರ್ಧೆಯನ್ನು 25-02-2001ರಂದು ಏರ್ಪಡಿಸಿತ್ತು.

ಕನ್ನಡ ಸಂಸ್ಕೃತಿ ಇಲಾಖೆ ನಿರ್ದೇಶಕರಾದ ಕೆ. ಸಿ. ರಾಮಮೂರ್ತಿ ಅವರು ಸ್ಪರ್ಧೆಯನ್ನು ಉದ್ಘಾಟಿಸಿ ಮಾತನಾಡಿ 'ಬಿ.ಎಂ.ಶ್ರೀ ಪ್ರತಿಷ್ಠಾನ ಉತ್ತಮ ಕೆಲಸಗಳನ್ನು ಮಾಡುತ್ತಿದ್ದು ನಾಡಿನಲ್ಲಿ ಸಾಹಿತ್ಯ ಸಂಸ್ಕೃತಿಯನ್ನು ಅರ್ಥಪೂರ್ಣವಾಗಿ ಹರಡುತ್ತಿದೆ. ಈ ಕೆಲಸಕ್ಕೆ ಸಾರ್ವಜನಿಕರು ಹೆಗಲುಕೊಡಬೇಕಾಗಿದೆ' ಎಂದರು.

'ರಾಜ್ಯಮಟ್ಟದ ಸ್ಪರ್ಧೆಗೆ ಇಲಾಖೆ ಆರ್ಥಿಕ ನೆರವನ್ನು ಒದಗಿಸುತ್ತದೆ ಎಂಬ ಭರವಸೆ ನೀಡಿದ ಅವರು ಇಂಥ ಕಾರ್ಯಕ್ರಮಗಳು ನಿರಂತರವಾಗಿ ನಡೆಯುತ್ತಿರಬೇಕು' ಎಂದರು.

ಪ್ರತಿಷ್ಠಾನದ ಗೌರವಾಧ್ಯಕ್ಷರಾದ ನಿಟ್ಟೂರು ಶ್ರೀನಿವಾಸರಾವ್ ಅವರ ಅಧ್ಯಕ್ಷತೆಯಲ್ಲಿ ನಡೆದ ಕಾರ್ಯಕ್ರಮದಲ್ಲಿ ಪ್ರತಿಷ್ಠಾನದ ಅಧ್ಯಕ್ಷರಾದ ಎನ್. ಬಸವಾರಾಧ್ಯ ಸ್ವಾಗತಿಸಿದರು. ಗೌರವ ಕಾರ್ಯದರ್ಶಿ ಪ್ರೊ। ಗೀತಾಚಾರ್ಯ ಪ್ರಾಸ್ತಾವಿಕ ಮಾತುಗಳನ್ನು ಆಡಿದರು. ಸ್ಪರ್ಧೆಯ ಸಂಚಾಲಕಿ ಜಯಾ ಪಾರ್ಥಸಾರಥಿ ವಂದಿಸಿದರು.

**ಬಹುಮಾನ ವಿತರಣೆ**

ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಪ್ರತಿಷ್ಠಾನದ ಕಾರ್ಯದರ್ಶಿ ಪ್ರೊ। ಡಿ. ಲಿಂಗಯ್ಯ ಅವರ ಅಧ್ಯಕ್ಷತೆಯಲ್ಲಿ ನಡೆದ ಕಾರ್ಯಕ್ರಮದಲ್ಲಿ ಬಹುಮಾನಗಳನ್ನು ವಿತರಿಸಲಾಯಿತು.

ಸುಗಮ ಸಂಗೀತ ಕಲಾವಿದೆ ಮಾಲತಿ ಶರ್ಮ ಅವರು ಬಹುಮಾನ ವಿತರಿಸಿ ಮಾತನಾಡಿ 'ಕ್ಷೀಣಿಸುತ್ತಿದ್ದಂತೆ ಕಾಣುತ್ತಿದ್ದ ಕನ್ನಡ ಸುಗಮ ಸಂಗೀತ ಕ್ಷೇತ್ರ ಈ ರೀತಿ ಸ್ಪರ್ಧೆಗಳಿಂದ ಮತ್ತೆ ಚೇತರಿಸಿಕೊಂಡಂತೆ ಭಾಸವಾಗುತ್ತಿದೆ' ಎಂದರು.

'ಕಾವ್ಯ ಸುಮ್ಮನೆ ಹುಟ್ಟುವುದಿಲ್ಲ, ಆಯಾ ಕವಿಗಳ ಹೃದಯ-ಭಾವ, ಅನುಭವ ಪೂರ್ಣ ಮನಸ್ಸು ಅದರಲ್ಲಿರುತ್ತದೆ. ಅದನ್ನು ಅರ್ಥ ಮಾಡಿಕೊಂಡು ಕವಿಯನ್ನು ಗೌರವಿಸಿದರೆ ಕಾವ್ಯ ಗೀತೆಯಾಗುವಾಗ ಅದಕ್ಕೆ ಭಾವ ತುಂಬಲು ಸಾಧ್ಯವಾಗುತ್ತದೆ' ಎಂದು ಅವರು ಹೇಳಿದರು.

**ವಿಜೇತರ ವಿವರ**

ಭಾವಗೀತೆ, ಕಿರಿಯರ ವಿಭಾಗ : ಪ್ರಥಮ : ಲಕ್ಷ್ಮೀಮನಮೋಹನ್, ಬೆಂಗಳೂರು, ದ್ವಿತೀಯ : ಶಾರದಾಂಬ, ಬೆಂಗಳೂರು, ತೃತೀಯ : ಯು. ಬಿ. ಅಭಿಮನ್ಯು, ಬೆಂಗಳೂರು.

ಭಾವಗೀತೆ, ಹಿರಿಯರ ವಿಭಾಗ : ಪ್ರಥಮ : ಬಿ. ಆದರ್ಶ, ಬೆಂಗಳೂರು, ದ್ವಿತೀಯ : ರಶ್ಮಿ ಶ್ರೀನಾಥ್, ಬೆಂಗಳೂರು, ತೃತೀಯ : ಟಿ. ಎಸ್. ಸುಚಿಂತ್, ಬೆಂಗಳೂರು.

ಜನಪದ ಗೀತೆ, ಹಿರಿಯರ ವಿಭಾಗ : ಪ್ರಥಮ : ಎಚ್. ಶಿವರಾಮಯ್ಯ, ಕನಕಪುರ, ದ್ವಿತೀಯ : ರಶ್ಮಿ ಶ್ರೀನಾಥ್, ಬೆಂಗಳೂರು, ತೃತೀಯ : ಸಂಧ್ಯಾ ಎಂ. ಎ., ಬೆಂಗಳೂರು.

ಜನಪದ ಗೀತೆ, ಕಿರಿಯರ ವಿಭಾಗ : ಪ್ರಥಮ : ಶಾರದಾಂಬ, ಬೆಂಗಳೂರು, ದ್ವಿತೀಯ : ವಿಕ್ರಮ್ ಎಲ್. ಬೆಂಗಳೂರು, ತೃತೀಯ : ಬಿ. ಶ್ರೀ. ಲಕ್ಷ್ಮೀ, ಬೆಂಗಳೂರು,

ಸ್ಪರ್ಧೆಗೆ ನಾಡಿನ ವಿವಿಧ ಭಾಗಗಳಿಂದ 175 ಪ್ರವೇಶಗಳು ಬಂದಿದ್ದವು. ಎಸ್. ಆರ್. ಪುರಂದರ ಭರಣಿ, ರಮಾ ಅರವಿಂದ್, ಎಚ್. ಪಾಲ್ಗುಣ, ಎಂ. ಆರ್. ಅನಂತಮೂರ್ತಿ ಮತ್ತು ರವಿ ಅವರು ಸ್ಪರ್ಧೆಯ ತೀರ್ಪುಗಾರರಾಗಿದ್ದರು.

**ಕೃಪೆ : ಉದಯವಾಣಿ**

## ಪಾಶ್ಚಾತ್ಯ ಪ್ರಭಾವಕ್ಕೆ ಬಲಿಯಾಗುವ ವಿಮರ್ಶಕರ ಬಗೆಗೆ ವಿಷಾದ

ಕನ್ನಡದಲ್ಲಿ ಬರುವ ಜೀವನ ಚರಿತ್ರೆಗಳೆಲ್ಲ ಚರ್ವಿತಚರ್ವಣದಂತೆ ಒಂದೇ ರೀತಿಯಲ್ಲಿ ಸಿದ್ಧಶೈಲಿಯಲ್ಲಿರುತ್ತವೆ. ಬೇರೆಯವರು ಅಂತಹ ಕವಿ ವಿದ್ವಾಂಸರನ್ನು ಸಂದರ್ಶಿಸುವಾಗ ಸಿದ್ಧ ಪ್ರಶ್ನಾವಳಿಗಳನ್ನೇ ಪುನರಾವರ್ತಿಸುತ್ತಿರುತ್ತಾರೆ. ಭಿನ್ನತೆ, ಹೊಸತನ, ಒಳನೋಟಗಳನ್ನು ಹೊಂದಿರುವುದಿಲ್ಲ ಎಂಬ ಅಭಿಪ್ರಾಯವನ್ನು ನಾನು ಪಡೆದದ್ದು ಪಾಶ್ಚಾತ್ಯ ಓದಿನಿಂದ. ಅದರ ಪ್ರಭಾವದಿಂದ ನನ್ನ, ಕೆ.ಎಸ್.ನ ಮುಂತಾದ ಅನೇಕರ ಸಂದರ್ಶನ ಭಿನ್ನತೆಯನ್ನು ಪಡೆದಿದೆ. ಆದರೆ ಎಂ. ವಿ. ಸೀತಾರಾಮಯ್ಯನವರ ಆಧುನಿಕ ಸಾಹಿತ್ಯ ಸಮೀಕ್ಷೆ ಪುಸ್ತಕ ಓದಿದಾಗ ಆ ಮಾತುಗಳನ್ನು ಸೀತಾರಾಮಯ್ಯನವರೇ 50 ವರ್ಷಗಳ ಹಿಂದೆಯೇ ಹೇಳಿರುವುದನ್ನು ಓದಿ ಆಶ್ಚರ್ಯವಾಯಿತು ಮತ್ತು ನಾಚಿಕೆಯಾಯಿತು. ನಾನು ಒಂದು ವೇಳೆ ಈ ಪುಸ್ತಕವನ್ನು (ಕನ್ನಡ ಜೀವನ ಚರಿತ್ರೆಗಳು) ಮೊದಲೇ ಓದಿದ್ದರೆ ಇವರಿಂದಲೇ ಪ್ರಭಾವಿತನಾಗುತ್ತಿದ್ದೆ.

ಹೀಗೆಂದವರು ಪ್ರಸಿದ್ಧ ವಿಮರ್ಶಕ ಡಾ॥ ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ 12-3-2001ರಂದು ಬಿ.ಎಂ.ಶ್ರೀ ಕಲಾಭವನದಲ್ಲಿ ಏರ್ಪಡಿಸಿದ್ದ ಎಂ.ವಿ.ಸೀ. ಸಂಸ್ಮರಣೆ ಮತ್ತು ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ಮೇಲ್ಕಂಡ ಪುಸ್ತಕವನ್ನು ಬಿಡುಗಡೆ ಮಾಡಿ ಮಾತನಾಡುತ್ತ “ನಾವು ಏಕೆ ನಮ್ಮವರಿಂದಲೇ ಪ್ರಭಾವಿತರಾಗುತ್ತಿಲ್ಲ ಎಂಬ ಪ್ರಶ್ನೆಗೆ ಉತ್ತರ ಸರಳವಾಗಿದೆ. ನಮಗೆ ಕನ್ನಡ ಓದಿನ ಕೊರತೆಯಿದೆ. ವಿಮರ್ಶಕರು ಮಾತೆತ್ತಿದರೆ ಪಾಶ್ಚಾತ್ಯ ಪ್ರಭಾವಕ್ಕೆ ಬಲಿಯಾಗುವ ಬದಲು ನಮ್ಮ ಹಿರಿಯ ತಲೆಮಾರಿನ ಎಂ. ವಿ. ಸೀತಾರಾಮಯ್ಯನವರಂಥವರ ಪುಸ್ತಕಗಳನ್ನು ಓದಿ ನಮ್ಮವರ ಚಿಂತನೆಗಳನ್ನು ರೂಢಿಸಿಕೊಳ್ಳಬೇಕಾದ ಅಗತ್ಯವಿದೆ ಎಂದರು.

### ಪುನರ್ ಮೌಲ್ಯೀಕರಣವಾಗಬೇಕು

ಕನ್ನಡ ನಾಟಕಗಳ ಬಗ್ಗೆ ಸೀತಾರಾಮಯ್ಯನವರು ಹೇಳುವ ಮಾತುಗಳು ಅತ್ಯಂತ ಮಹತ್ವವೆನಿಸಿದೆ. ಅವರಿಗೆ ಕನ್ನಡ ನಾಟಕಗಳ ಸ್ವರೂಪ, ಹಿನ್ನೆಲೆ, ಇತಿಹಾಸಗಳ ಆಳವಾದ ಜ್ಞಾನವಿದೆ. ಕನ್ನಡಕ್ಕೇ ಒಂದು ಪ್ರತ್ಯೇಕವಾದ ಕಾವ್ಯ ಮೀಮಾಂಸೆಯ ಕಲ್ಪನೆಯನ್ನು ಕೊಟ್ಟಿದ್ದಾರೆ. ಇವುಗಳ ಹಿನ್ನೆಲೆಯಲ್ಲಿ ಇಂದು ಈ ಚಿಂತನೆಯನ್ನು ಬೆಳೆಸಬೇಕಾದ ಅಗತ್ಯವಿದೆ ಎಂದ ಡಾ।। ಬಾಲಸುಬ್ರಹ್ಮಣ್ಯ ಅವರು ಸೀತಾರಾಮಯ್ಯನವರಂಥವರ ಬರಹಗಳನ್ನು ಪುನರ್‌ಮೌಲ್ಯೀಕರಣ ಮಾಡಬೇಕಾದದ್ದು ಅತ್ಯಗತ್ಯ ಎಂದೂ ಅಭಿಪ್ರಾಯಪಟ್ಟರು.

'ಕರ್ನಾಟಕ ಲೋಚನ' ವಿಶೇಷಾಂಕ ಮತ್ತು 'ಶಂಬಾ ಸಾಹಿತ್ಯದಲ್ಲಿ ಗ್ರಾಮ ದೇವತೆ' ಪುಸ್ತಕಗಳನ್ನು ಬಿಡುಗಡೆ ಮಾಡಿದ ಅನಂತಪುರದ ಕೃಷ್ಣದೇವರಾಯ ವಿಶ್ವವಿದ್ಯಾನಿಲಯದ ಕನ್ನಡ ಪ್ರಾಧ್ಯಾಪಕ ಡಾ।। ಆರ್. ಶೇಷಶಾಸ್ತ್ರಿ ಅವರು ಪ್ರತಿಷ್ಠಾನಕ್ಕೆ ಘನತೆಯನ್ನು ತಂದುಕೊಟ್ಟಿರುವ ಲೋಚನ ವಿದ್ವತ್ ಪತ್ರಿಕೆಯು ಸೀತಾರಾಮಯ್ಯನವರ ಆಶಯಕ್ಕನುಗುಣವಾಗಿಯೇ ಅದೇ ಗುಣಮಟ್ಟದಲ್ಲಿ ಮುಂದುವರಿಯುತ್ತಿರುವುದು ಅತ್ಯಂತ ಸಂತೋಷದ ಸಂಗತಿ. ಅದಕ್ಕಾಗಿ ಶ್ರಮಿಸುತ್ತಿರುವ ಸಂಪಾದಕ ವರ್ಗದವರು ಅಭಿನಂದನೀಯರು ಎಂದರು.

ಶಂಬಾ ಅವರ ಬರಹ ಎಷ್ಟು ಕಠಿಣವೋ ಅವರನ್ನು ಕುರಿತು ಬರೆಯುತ್ತಿರುವ ಬರಹಗಳೂ ಅಷ್ಟೇ ಕಠಿಣವಾಗುತ್ತಿರುವ ಸನ್ನಿವೇಶದಲ್ಲಿ ಡಾ।। ನಿಂಗಣ್ಣ ಸಣ್ಣಕ್ಕಿಯವರ 'ಶಂಬಾ ಸಾಹಿತ್ಯದಲ್ಲಿ ಗ್ರಾಮದೇವತೆ' ಪುಸ್ತಕವೂ ಅತ್ಯಂತ ಮಹತ್ವಪೂರ್ಣದ್ದಾಗಿದೆ. ಶಂಬಾ ಅವರನ್ನು ಹತ್ತಿರದಿಂದ ಬಲ್ಲ, ಅವರ ಸಾಹಿತ್ಯವನ್ನು ಗಂಭೀರವಾಗಿ ಅಧ್ಯಯನ ಮಾಡಿರುವ ಸಣ್ಣಕ್ಕಿಯವರು ಅಷ್ಟೇ ಸರಳವಾಗಿ ಅವರ ಚಿಂತನೆಗಳನ್ನು ಹಿಡಿದಿಟ್ಟಿದ್ದಾರೆ ಎಂದರು.

### ಎಂ.ವೀ.ಸಿ. ಕನಸು ನನಸು

ಉದ್ಘಾಟನೆ ಮಾಡಿದ ಲೋಕಶಕ್ತಿಯ ರಾಜ್ಯಘಟಕದ ಅಧ್ಯಕ್ಷರಾದ ವಿ. ಎಸ್. ಕೃಷ್ಣಯ್ಯರ್ ಅವರು ಸೀತಾರಾಮಯ್ಯನವರನ್ನು ನಾನು ಮೊದಲಿನಿಂದಲೂ ಬಲ್ಲೆ. ಅವರ ಪ್ರತಿಷ್ಠಾನದ ಕನಸು ಇಂದು ನನಸಾಗಿದೆ. ನಾ. ಗೀತಾಚಾರ್ಯರ ಶ್ರಮ ಸಾರ್ಥಕವಾಗಿದೆ ಎಂದು ಹೇಳಿ ರಾಮಕೃಷ್ಣ ಹೆಗಡೆಯವರ ಸಂಸದರ ನಿಧಿಯಿಂದ ಬಿ.ಎಂ.ಶ್ರೀ ಕಲಾಭವನ ನಿರ್ಮಾಣಕ್ಕೆ ಇನ್ನೂ ಹೆಚ್ಚಿನ ನೆರವನ್ನು ಒದಗಿಸಲು ಪ್ರಯತ್ನಿಸುತ್ತೇನೆ ಎಂದರು.

ಮುಖ್ಯ ಅತಿಥಿಗಳನ್ನು ಪ್ರಸಿದ್ಧ ಸಂಶೋಧಕರಾದ ಮೈಸೂರಿನ ಪ್ರೊ।। ಟಿ. ವಿ. ವೆಂಕಟಾಚಲಶಾಸ್ತ್ರೀ ಅವರು ಬಿ.ಎಂ.ಶ್ರೀ ಪ್ರತಿಷ್ಠಾನ ಕರ್ನಾಟಕದಲ್ಲೇ ಶ್ರೇಷ್ಠ ಸಂಶೋಧನ ಕೇಂದ್ರವಾಗಿದೆ. ಅದರ ಪ್ರಕಟಣೆಗಳು-ಪತ್ರಿಕೆ-ಚಟುವಟಿಕೆಗಳು ಕನ್ನಡ ಸಂಶೋಧನ ಕ್ಷೇತ್ರದಲ್ಲೇ ಪ್ರಮುಖವಾದವು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಸಂಸ್ಥೆಯು ಅದರ

ಸಂಸ್ಥಾಪಕ ಎಂ.ವಿ.ಸೀ.ಯವರ ಸ್ಮಾರಕವೂ ಆಗುತ್ತಿರುವುದು ಆ ಪ್ರಾತಃಸ್ಮರಣೀಯರಿಗೆ ಸಲ್ಲಿಸುತ್ತಿರುವ ನಿಜವಾದ ಗೌರವವಾಗಿದೆ ಎಂದರು.

ಎಂ.ವಿ.ಸೀ. ಸಂಸ್ಮರಣ ಉಪನ್ಯಾಸ ಮಾಡಿದ ಪ್ರಸಿದ್ಧ ಸಾಹಿತಿಗಳಾದ ಮೈಸೂರಿನ ಡಾ।। ಪ್ರಭುಶಂಕರ್ ಅವರು ಸೀತಾರಾಮಯ್ಯನವರೊಂದಿಗಿನ ಸಂಬಂಧದ ಸುಮಧುರ ನೆನಪುಗಳನ್ನು ರಸನಿಮಿಷಗಳನ್ನು ಹಂಚಿಕೊಂಡರು.

**ಸಾಧನೆಯ ಬಗೆಗೆ ಹೆಮ್ಮೆ**

ಅಧ್ಯಕ್ಷತೆ ವಹಿಸಿದ್ದ ಪ್ರಸಿದ್ಧ ವಿಮರ್ಶಕ ಪ್ರೊ।। ಎಲ್. ಎಸ್. ಶೇಷಗಿರಿರಾವ್ ಅವರು ಸಂಸ್ಥೆಯ ಸಾಧನೆಯ ಬಗೆಗೆ ಹೆಮ್ಮೆಪಟ್ಟರು. ವಿಶ್ವವಿದ್ಯಾನಿಲಯಗಳು, ಸರ್ಕಾರ, ಪುಸ್ತಕ ಪ್ರಾಧಿಕಾರಗಳು ಹಮ್ಮಿಕೊಳ್ಳಬಹುದಾದ ಸಮಗ್ರ ಸಾಹಿತ್ಯ ಪ್ರಕಟನೆಯಂತಹ ಬೃಹತ್ ಯೋಜನೆಯನ್ನು ಪ್ರತಿಷ್ಠಾನವು ಸೀತಾರಾಮಯ್ಯನವರ ಮಕ್ಕಳ ಸಹಕಾರದಿಂದ ನಡೆಸುತ್ತಿರುವುದು ಅಭಿನಂದನೀಯವೆಂದರು.

ಸರ್ಕಾರ ಈ ಸಂಸ್ಥೆಗೆ ಹೆಚ್ಚಿನ ಆರ್ಥಿಕ ದೃಢತೆಯನ್ನು ಒದಗಿಸಿ ಇಂತಹ ನಿಷ್ಠಾವಂತ ಸಂಸ್ಥೆಗೆ ಬಲ ತಂದುಕೊಡಬೇಕೆಂದು ಅವರ ನಾಡಿನ ಸಾಂಸ್ಕೃತಿಕ ಕ್ಷೇತ್ರದ ಹೆಗ್ಗುರುತಾಗಿರುವ ಪ್ರತಿಷ್ಠಾನದ ಈ ಸಾಧನೆಯ ಹಿಂದೆ ಸಂಸ್ಥಾಪಕ ಸೀತಾರಾಮಯ್ಯನವರ ನಿಷ್ಠೆ, ಪ್ರಾಮಾಣಿಕತೆ ಮತ್ತು ಶ್ರದ್ಧಾಪೂರ್ಣ ಮಾರ್ಗದರ್ಶನ, ಅದನ್ನು ಚಾಚೂ ತಪ್ಪದಂತೆ ಮುಂದುವರಿಸಿಕೊಂಡು ಬರುತ್ತಿರುವ ಗೀತಾಚಾರ್ಯರಂಥವರ ಪರಿಶ್ರಮವಿದೆ ಎಂದೂ ಅಭಿಪ್ರಾಯಪಟ್ಟರು.

ಜಯಾ ಪಾರ್ಥಸಾರಥಿ ಮತ್ತು ತಂಡದವರು ಸುಶ್ರಾವ್ಯವಾಗಿ ಹಾಡಿದ ಎಂ.ವಿ.ಸೀ. ಅವರ ಗೀತೆಗಳೊಂದಿಗೆ ಆರಂಭವಾದ ಕಾರ್ಯಕ್ರಮದಲ್ಲಿ ವ್ಯವಸ್ಥಾಪಕ ಕಾರ್ಯದರ್ಶಿ ಪ್ರೊ।। ಡಿ. ಲಿಂಗಯ್ಯ ಅವರು ಸ್ವಾಗತ ಮಾಡಿದರು. ಗೌರವ ಕಾರ್ಯದರ್ಶಿ ಪ್ರೊ।। ನಾ. ಗೀತಾಚಾರ್ಯರು ನಿರ್ವಹಣೆ ಮಾಡಿದರು. ಲೋಚನ ಸಂಪಾದಕರಾದ ಎಸ್. ವಿ. ಶ್ರೀನಿವಾಸರಾವ್ ವಂದಿಸಿದರು.

ಕೃಪೆ : **ಬಹುಜನ ಕನ್ನಡಿಗರು,** 1-04-2001

## ನಂಜುಂಡಾರಾಧ್ಯರ ಸಾಹಿತ್ಯ ವಾಚಿಕೆ ಪ್ರಕಟಣೆಗೆ ಕರೆ

ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರ 'ಸಮಗ್ರ ಸಾಹಿತ್ಯದ ವಾಚಿಕೆ' ಪ್ರಕಟವಾಗಬೇಕೆಂದು ಸಾಹಿತಿ ಡಾ।। ಪ್ರಧಾನ ಗುರುದತ್ತ ಹೇಳಿದರು. 15-4-2001ರಂದು 'ನಂಜುಂಡಾರಾಧ್ಯ ಸ್ಮಾರಕ ದತ್ತಿ ಉಪನ್ಯಾಸ' ನೀಡುತ್ತ ಎಂ. ಜಿ. ನಂಜುಂಡಾರಾಧ್ಯ ಅವರ ಸಾಹಿತ್ಯವನ್ನು ಕುರಿತು ಮಾತನಾಡಿದರು. ನಂಜುಂಡಾರಾಧ್ಯರು ಕನ್ನಡ ಸಂಸ್ಕೃತ ಸಾಹಿತ್ಯಗಳಲ್ಲಿ ಹೆಸರಾಂತ ವಿದ್ವಾಂಸರಾಗಿದ್ದು, ಎರಡೂ ಭಾಷೆಗಳಲ್ಲಿ

ನೂರಾರು ಪಾಂಡಿತ್ಯಪೂರ್ಣ ಗ್ರಂಥಗಳನ್ನು ರಚಿಸಿದ್ದಾರೆ. ಇವರ ಜೀವನ ವಿವರಗಳಾಗಲಿ, ಕೃತಿಗಳ ವಿವರಗಳಾಗಲಿ ಯಾವ ಕೃತಿಯಲ್ಲೂ ಖಚಿತವಾಗಿಲ್ಲ. ಒಂದೊಂದರಲ್ಲಿ ಒಂದೊಂದು ಅಂಕಿ ಅಂಶಗಳಿವೆ. ಅಲ್ಲದೆ ಒಂದೊಂದು ಕೃತಿಯೂ ವಿಶಿಷ್ಟವಾಗಿದ್ದು, ಅವುಗಳ ಹೆಸರುಗಳ ಪಟ್ಟಿಯಿಂದಲೇ ಆ ಕೃತಿ ಯಾವ ವಿಚಾರಕ್ಕೆ ಸಂಬಂಧಿಸಿದ್ದೆಂದು ವೇದ್ಯವಾಗುವುದಿಲ್ಲ. ಆದ್ದರಿಂದ ಇವನ್ನೆಲ್ಲ ಸರಿದೂಗಿಸಲು ಮತ್ತು ಈ ಮಹಾವಿದ್ವಾಂಸರ ಸಾಹಿತ್ಯದ ಪರಿಚಯ ಮಾಡಿಕೊಳ್ಳಲು ಇವರ 'ಸಮಗ್ರ ಸಾಹಿತ್ಯದ ವಾಚಿಕೆ'ಯೊಂದು ಮೊದಲು ಪ್ರಕಟವಾಗಬೇಕಾಗಿದೆ ಎಂದು ಡಾ|| ಪ್ರಧಾನ ಗುರುದತ್ತ ಅಭಿಪ್ರಾಯಪಟ್ಟರು.

ಸ್ಮಾರಕ ದತ್ತಿ ಸಮಿತಿಯ ಪರವಾಗಿ ಉಪಾಧ್ಯಕ್ಷ ಜಿ. ಚನ್ನವೀರಸ್ವಾಮಿ ಹಾಗೂ ಕಾರ್ಯದರ್ಶಿ ವಿದ್ವಾನ್ ಜಿ. ವಿ. ಶಿವಸ್ವಾಮಿ ಮಾತನಾಡಿದರು.

ಸ್ಮಾರಕ ಸಮಿತಿಯನ್ನು ಮುಕ್ತಾಯಗೊಳಿಸಿ ಅದರಲ್ಲಿ ಉಳಿದಿದ್ದ 5 ಸಾವಿರ ರೂ.ಗಳನ್ನು ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ಈಗಾಗಲೇ ಸ್ಥಾಪಿಸಿರುವ ಎಂ. ಜಿ. ನಂಜುಂಡಾರಾಧ್ಯರ ದತ್ತಿನಿಧಿಗೆ ಸೇರಿಸಲು ಪ್ರತಿಷ್ಠಾನದ ಅಧ್ಯಕ್ಷರಿಗೆ ನೀಡಿದ ಸಮಿತಿಯ ಅಧ್ಯಕ್ಷ ವಿದ್ವಾನ್ ಬಿ. ಕೆ. ಶಿವಯ್ಯ ಅವರು ಪ್ರತಿಷ್ಠಾನದ ಕಾರ್ಯ ಚಟುವಟಿಕೆಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು.

ಪ್ರಾಸ್ತಾವಿಕ ಮಾತುಗಳನ್ನಾಡಿದ ಸಮಿತಿಯ ಕಾರ್ಯಾಧ್ಯಕ್ಷರೂ, ಪ್ರತಿಷ್ಠಾನದ ಅಧ್ಯಕ್ಷರೂ ಆದ ಎನ್. ಬಸವಾರಾಧ್ಯರು ಬಂಧುಗಳು ಮತ್ತು ಅಭಿಮಾನಿಗಳ ಸಹಕಾರದಿಂದ ಎಂ. ಜಿ. ನಂಜುಂಡಾರಾಧ್ಯರ ಸಾಹಿತ್ಯ ವಾಚಿಕೆಯನ್ನು ಪ್ರತಿಷ್ಠಾನದ ಮೂಲಕವೇ ಪ್ರಕಟಿಸಲಾಗುವುದು ಎಂದು ತಿಳಿಸಿದರು.

ಪ್ರತಿಷ್ಠಾನದ ವ್ಯವಸ್ಥಾಪಕ ಕಾರ್ಯದರ್ಶಿ ಪ್ರೊ|| ಡಿ. ಲಿಂಗಯ್ಯ ಸ್ವಾಗತಿಸಿದರು. ಗೌರವ ಕಾರ್ಯದರ್ಶಿ ಪ್ರೊ|| ನಾ. ಗೀತಾಚಾರ್ಯ ವಂದಿಸಿದರು.

**ಕೃಪೆ : ವಿಜಯ ಕರ್ನಾಟಕ, 23-4-2001**

## ಜನವರಿಯಿಂದ ಜೂನ್‌ವರೆಗೆ ನಡೆದಿರುವ ದತ್ತಿ ಉಪನ್ಯಾಸಗಳು

| ದಿನಾಂಕ | ದತ್ತಿ | ವಿಷಯ | ಉಪನ್ಯಾಸ |
|---|---|---|---|
| 27-02-01 | ಡಾ|| ಶಾಂತಾ ಪ್ರಭುಶಂಕರ ದತ್ತಿ | ಮಹಿಳೆಯರು ಮತ್ತು ಮಕ್ಕಳಿಗೆ ಅಗತ್ಯವಾದ ಆರೋಗ್ಯ ಶಿಕ್ಷಣ | ಡಾ|| ಎಂ. ಎಲ್. ಲಲಿತಮ್ಮ<br>ಅಧ್ಯಕ್ಷತೆ : ಶ್ರೀ ಎನ್. ಬಸವಾರಾಧ್ಯ |
| 15-03-01<br>ಚಳ್ಳಕೆರೆ | ಟಿ. ಎಸ್. ವೆಂಕಣ್ಣಯ್ಯ ದತ್ತಿ | ಕನ್ನಡ ನಾಟಕಗಳು | ಪ್ರೊ|| ಡಿ. ಲಿಂಗಯ್ಯ<br>ಅಧ್ಯಕ್ಷತೆ : ಶ್ರೀ ಜಿ. ಬಿ. ಪಾಟೀಲ್ |

| | | | |
|---|---|---|---|
| 20-04-01 | ವಿ. ಸೀ. ಸ್ಮಾರಕ ದತ್ತಿ | ವಿ. ಸೀ. ಅವರ ಕಾವ್ಯ | ಡಾ॥ ಎಚ್. ಎಸ್. ವೆಂಕಟೇಶಮೂರ್ತಿ. ಅಧ್ಯಕ್ಷತೆ : ನಿಟ್ಟೂರು ಶ್ರೀನಿವಾಸರಾವ್ |
| 08-05-01 ಗದಗ್ ಜಿಲ್ಲಾ ಕ.ಸಾ.ಪ. ಸಹಯೋಗ | ಟಿ. ಎನ್. ಮಹದೇವಯ್ಯ ಸ್ಮಾರಕ ದತ್ತಿ | ಮಹದೇವಯ್ಯನವರ ಸಾಹಿತ್ಯ ಸ್ಮರಣೋತ್ಸವ | ಪ್ರೊ॥ ಟಿ. ಎಂ. ಅಮೃತಕುಮಾರಿ ಪ್ರೊ॥ ಬಿ. ವೀರಭದ್ರಯ್ಯ ಪ್ರೊ॥ ಬಿ. ಎಸ್. ಗೊರವರ ಪ್ರೊ॥ ಆರ್. ಎಸ್. ಪೊಲೀಸ್ ಪಾಟೀಲ ಅಧ್ಯಕ್ಷತೆ : ಡಾ॥ ಎಸ್. ಎಂ. ವೃಷಭೇಂದ್ರಸ್ವಾಮಿ |
| 24-06-01 ಬೆಳ್ಳೂರು | ಜಿ. ಪಿ. ರಾಜರತ್ನಂ ಮತ್ತು ವೆಂಕಟರಂಗಪ್ಪ ದತ್ತಿ | ಸಾಹಿತ್ಯದಲ್ಲಿ ಸಮನ್ವಯತೆ | ಡಾ॥ ನೀ. ಕೃ. ರಾಮಶೇಷನ್ ಅಧ್ಯಕ್ಷತೆ : ಪ್ರೊ॥ ನಾ. ಗೀತಾಚಾರ್ಯ |

## ಇತಿಹಾಸ ಅಕಾಡೆಮಿಯ ನಗರ ಜಿಲ್ಲಾ ಘಟಕದ ಸಹಯೋಗದಲ್ಲಿ ದ್ವೈಮಾಸಿಕ ಉಪನ್ಯಾಸ ಕಾರ್ಯಕ್ರಮ

ಪ್ರತಿಷ್ಠಾನದ ಸಭಾಂಗಣದಲ್ಲಿ ಈ ವರ್ಷದಿಂದ ಈ ಉಪನ್ಯಾಸ ಮಾಲಿಕೆಯನ್ನು ಆರಂಭಿಸಲಾಗಿದ್ದು ಇತಿಹಾಸ ಅಕಾಡೆಮಿ ನಗರ ಜಿಲ್ಲಾ ಘಟಕದ ಅಧ್ಯಕ್ಷೆ ಶ್ಯಾಮಲಾ ರತ್ನಕುಮಾರಿ ಅವರ ಸಹಕಾರದಲ್ಲಿ ನಡೆಯುತ್ತಿದೆ. ಪ್ರತಿಷ್ಠಾನದಲ್ಲಿ ಈ ಹಿಂದೆ ನಡೆಯುತ್ತಿದ್ದ 'ಸಹೃದಯಗೋಷ್ಠಿ'ಯ ಉಪನ್ಯಾಸ ಕಾರ್ಯಕ್ರಮಗಳ ಭಾಗವಾಗಿ ಇದು ಆರಂಭವಾಗಿದೆ. ಉಳಿದ ತಿಂಗಳುಗಳಲ್ಲಿ ಕವಿತಾವಾಚನ ಕಾರ್ಯಕ್ರಮಗಳನ್ನು ಸಂಘಟಿಸಬೇಕಾಗಿದ್ದು ಅದಕ್ಕಾಗಿ ಸಂಚಾಲಕರಾದ ಶ್ರೀಮತಿ ಜಯಮ್ಮ ಕರಿಯಣ್ಣ ಮತ್ತು ಶ್ರೀ ಕೆ. ಬಸವರಾಜಪ್ಪ ಪ್ರಯತ್ನಿಸುತ್ತಿದ್ದಾರೆ. ಈ ಅವಧಿಯಲ್ಲಿ ಈ ಕೆಳಕಂಡ ಉಪನ್ಯಾಸಗಳು ನಡೆದಿವೆ.

| ದಿನಾಂಕ | ವಿಷಯ | ಉಪನ್ಯಾಸಕರು | ಅಧ್ಯಕ್ಷತೆ |
|---|---|---|---|
| 2-1-01 | ಶ್ರೀವೈಷ್ಣವ ಹರಿದಾಸ ಸಾಹಿತ್ಯ | ಪ್ರೊ॥ ನಾ. ಗೀತಾಚಾರ್ಯ | ಪ್ರೊ॥ ಇಂದಿರಮ್ಮ ಪ್ರಾಚಾರ್ಯರು, ಸರ್ಕಾರಿ ಸಂಸ್ಕೃತ ಕಾಲೇಜು, ಬೆಂಗಳೂರು. |
| 2-3-01 | ಆಳ್ವಾರರ ಭಕ್ತಿಗೀತೆಗಳು ಮತ್ತು ಹರಿದಾಸರ ಹಾಡುಗಳು | ಡಾ॥ ನೀ. ಕೃ. ರಾಮಶೇಷನ್ ಮೈಸೂರು | ಡಾ॥ ಸೂರ್ಯನಾಥ ಕಾಮತ್ |

| 4-5-01 | ಆಂಗ್ಲರ ಆಳ್ವಿಕೆಯಲ್ಲಿ ಸಂಸ್ಕೃತ ಹಸ್ತಪ್ರತಿಗಳ ಸಂರಕ್ಷಣೆ | ಶ್ರೀ ಎಸ್. ಎಲ್. ಶ್ರೀನಿವಾಸ ಮೂರ್ತಿ | ಪ್ರೊ॥ ಡಿ. ಲಿಂಗಯ್ಯ |
|---|---|---|---|

## ಅನುದಾನ

ಕನ್ನಡ ಸಂಸ್ಕೃತಿ ಇಲಾಖೆಯು 2000-01ನೇ ಸಾಲಿನ ವಾರ್ಷಿಕ ನಿರ್ವಹಣಾ ವೆಚ್ಚಕ್ಕಾಗಿ 50,000-00 ರೂ.ಗಳನ್ನೂ ದ್ವಿದಶಮಾನೋತ್ಸವ ಗ್ರಂಥಮಾಲೆ ಪುಸ್ತಕ ಪ್ರಕಟಣೆಗಾಗಿ 50,000-00 ರೂ.ಗಳನ್ನೂ ಅನುದಾನವಾಗಿ ನೀಡಿದೆ. ಈ ಸಹಾಯಧನಕ್ಕಾಗಿ ಪ್ರತಿಷ್ಠಾನ ಸರ್ಕಾರಕ್ಕೆ ಆಭಾರಿಯಾಗಿರುತ್ತದೆ.

## ಹಸ್ತಪ್ರತಿದಾನ

ಬಿ.ಎಂ.ಶ್ರೀ ಪ್ರತಿಷ್ಠಾನದ ಹಸ್ತಪ್ರತಿ ಭಂಡಾರಕ್ಕೆ ಹೈದರಾಬಾದಿನ ಶ್ರೀಮತಿ ಸಾವಿತ್ರಮ್ಮ ರಾಮಸ್ವಾಮಿ ಅವರ ಮೂಲಕ ಬೇಟೆರಾಯ ದೀಕ್ಷಿತರ 'ವಾಸವಾಂಬಾ ಪುರಾಣ' ಗ್ರಂಥದ ಕಾಗದದ ಸ್ವಹಸ್ತಾಕ್ಷರ ಹಸ್ತಪ್ರತಿ ಹಾಗೂ ಈಗ ಮಹಾರಾಷ್ಟ್ರದ ರತ್ನಗಿರಿ ಜಿಲ್ಲೆಯ ದೇವರುಖ್‌ನಲ್ಲಿರುವ ಭದ್ರಾವತಿಯ ಪ. ಭ. ಪರಮೇಶ್ವರಪ್ಪ ಅವರಿಂದ ಮೂರು ಓಲೆಗರಿ ಹಸ್ತಪ್ರತಿಗಳು ದಾನವಾಗಿ ಬಂದಿವೆ.

## ಧನ ಸಹಾಯ

### ೧. ದತ್ತಿನಿಧಿಗೆ ದಾನ :

#### ಅ) ಎಂ. ಜಿ. ನಂಜುಂಡಾರಾಧ್ಯರ ಸ್ಮಾರಕ ದತ್ತಿನಿಧಿ :

ಪ್ರಸಿದ್ಧ ಸಂಸ್ಕೃತ ವಿದ್ವಾಂಸರಾಗಿದ್ದ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರ ಹೆಸರಿನಲ್ಲಿ ಎಂ. ಜಿ. ಎನ್. ಸನ್ಮಾನ ಸಮಿತಿ ಪ್ರತಿಷ್ಠಾನದಲ್ಲಿ ಈ ಮೊದಲೆ ಸ್ಥಾಪಿಸಿರುವ 10,000 ರೂ.ಗಳ ದತ್ತಿನಿಧಿಗೆ ಈ ಅವಧಿಯಲ್ಲಿ ಇನ್ನೂ 5,000 ರೂ.ಗಳನ್ನು ಕೂಡಿಸಿದೆ.

#### ಆ) ಟಿ. ಎನ್. ಮಹದೇವಯ್ಯ ಸ್ಮಾರಕ ದತ್ತಿನಿಧಿ :

ತುಮಕೂರಿನ ಪ್ರಮುಖ ಸಾಹಿತಿಗಳೂ, ಕವಿಗಳೂ ಆಗಿದ್ದ ಟಿ. ಎನ್. ಮಹದೇವಯ್ಯ ಅವರ ಹೆಸರಿನಲ್ಲಿ ಅಭಿಮಾನಿಗಳು, ಬಂಧುಗಳು ಪ್ರೊ॥ ಬಿ. ವೀರಭದ್ರಯ್ಯ ಅವರ ಮೂಲಕ ಸ್ಥಾಪಿಸಿರುವ ದತ್ತಿನಿಧಿಗೆ ಈ ಸಾಲಿನಲ್ಲಿ ಸ್ವತಃ ವೀರಭದ್ರಯ್ಯನವರು 250-00 ರೂ.ಗಳನ್ನೂ ಶ್ರೀ ಮರಿಬಸಪ್ಪ ಅವರು 200 ರೂ.ಗಳನ್ನೂ ದಾನವಾಗಿ ನೀಡಿದ್ದಾರೆ. ಈ ದತ್ತಿನಿಧಿಯಲ್ಲಿ ಈವರೆಗೆ 16,750-00 ರೂ.ಗಳು ಸಂಗ್ರಹವಾಗಿದೆ.

೩) ರಾಘವ ಪ್ರಕಾಶನ ದತ್ತಿ ನಿಧಿ :

ಎಂ. ವಿ. ಸೀತಾರಾಮಯ್ಯನವರ ಸಮಗ್ರ ಸಾಹಿತ್ಯ ಪ್ರಕಟಣೆಯ ಉದ್ದೇಶವನ್ನು ಹೊಂದಿರುವ ಎಂ.ವಿ.ಸೀ. ಅವರ ಮಕ್ಕಳು ಸ್ಥಾಪಿಸಿರುವ ಈ ದತ್ತಿನಿಧಿಗೆ ಸೇರಿಸಲು ಎಂ.ವಿ.ಸೀ. ಅವರ ಕೃತಿಗಳ ಗೌರವ ಧನದ (ರಾಯಲ್ಟಿ) ಹಣವನ್ನು ಪ್ರತಿಷ್ಠಾನಕ್ಕೇ ನೀಡಿದ್ದಾರೆ. ಈ ಅವಧಿಯಲ್ಲಿ ಶ್ರೀ ಎಂ. ಎಸ್. ಭಾಸ್ಕರ್ ಅವರ ಮೂಲಕ ಆಕಾಶವಾಣಿಯಿಂದ 200-00 ಮತ್ತು ಮೈಸೂರು ವಿಶ್ವವಿದ್ಯಾನಿಲಯದಿಂದ 250-00 ರೂ.ಗಳು ಬಂದಿವೆ.

## ೨. ಸುಗಮ ಸಂಗೀತ ಸ್ಪರ್ಧೆಗೆ ದಾನ

ಪ್ರತಿಷ್ಠಾನ ಕಾಳಿಂಗರಾಯರ ಬಳಗದ ಸಹಕಾರದಲ್ಲಿ ಈ ವರ್ಷದಿಂದ ಆರಂಭಿಸಿರುವ ಬಿ.ಎಂ.ಶ್ರೀ ಸ್ಮಾರಕ ಭಾವಗೀತೆ ಮತ್ತು ಕಾಳಿಂಗರಾವ್ ಸ್ಮಾರಕ ಜಾನಪದ ಗೀತೆಗಳ ಸ್ಪರ್ಧೆಗಳು ಅಖಿಲ ಕರ್ನಾಟಕ ಸುಗಮ ಸಂಗೀತ ಸ್ಪರ್ಧೆಗೆ ಕನ್ನಡ ಸಂಸ್ಕೃತಿ ಇಲಾಖೆ 5,000 ರೂ.ಗಳ ಧನ ಸಹಾಯವನ್ನು ನೀಡಿದೆ. ಶ್ರೀ ಜಿ. ಎಸ್. ಶಿವಲಿಂಗಯ್ಯನವರು ಬಹುಮಾನಗಳಿಗಾಗಿ 1000-00 ರೂ.ಗಳನ್ನೂ, ಶ್ರೀ ವಿ. ಲಕ್ಷ್ಮೀನಾರಾಯಣ ಅವರು ಉಪಹಾರಕ್ಕಾಗಿ 2,000-00 ರೂ.ಗಳನ್ನು ನೀಡಿ ಪ್ರೋತ್ಸಾಹಿಸಿದ್ದಾರೆ.

ಪ್ರತಿವರ್ಷ ನಿರಂತರವಾಗಿ ಈ ಕಾರ್ಯಕ್ರಮವನ್ನು ನಡೆಸಲು ನಿರ್ಧರಿಸಲಾಗಿದ್ದು ಆ ಉದ್ದೇಶಕ್ಕಾಗಿ ಒಂದು 'ದತ್ತಿನಿಧಿ'ಯನ್ನೇ ಸ್ಥಾಪಿಸುವ ಆಲೋಚನೆಯಿದ್ದು ಅಭಿಮಾನಿಗಳು ಈ ನಿಧಿಗೆ ಧನ ಸಹಾಯ ಮಾಡಬೇಕಾಗಿ ವಿನಂತಿ.

## ೩. 'ಬಿ.ಎಂ.ಶ್ರೀ ಕಲಾಭವನ' ಕಟ್ಟಡ ನಿಧಿಗೆ ದಾನ

ಈ ಅವಧಿಯಲ್ಲಿ ಈ ಕೆಳಕಂಡ ಮಹನೀಯರಿಂದ ದಾನ ಸಂಗ್ರಹವಾಗಿದೆ.

| | | |
|---|---|---|
| 1. | ಶ್ರೀಮತಿ ಕೆ. ವಿ. ಲಲಿತಾಂಬ, ಬೆಂಗಳೂರು | 25,000-00 |
| 2. | ಶ್ರೀ ಬಿ. ಆನಂದ್, ಬೆಂಗಳೂರು | 500-00 |
| 3. | ಶ್ರೀ ಎನ್. ಎಸ್. ರಾಮಸ್ವಾಮಿ ಅಯ್ಯರ್, ಬೆಂಗಳೂರು | 300-00 |
| 4. | ಶ್ರೀಮತಿ ಡಾ॥ ಎಮ್. ಎಲ್. ಲಲಿತಮ್ಮ, ಬೆಂಗಳೂರು | 300-00 |
| 5. | ಪ್ರೊ॥ ಜಿ. ಶ್ರೀನಿವಾಸರಾಜು, ಬೆಂಗಳೂರು | 250-00 |
| 6. | ಡಾ॥ ಆರ್. ಶೇಷಶಾಸ್ತ್ರೀ, ಅನಂತಪುರ | 200-00 |
| 7. | ಪ್ರೊ॥ ಅ. ರಾ. ಮಿತ್ರ, ಬೆಂಗಳೂರು | 100-00 |

### ೪. ಗ್ರಂಥಾಲಯಕ್ಕೆ ದಾನ

ಗ್ರಂಥಾಲಯದ ಅನುಕೂಲಕ್ಕಾಗಿ ಪುಸ್ತಕದ ಸ್ಟ್ಯಾಂಡ್‌ಗಳನ್ನು ಕೊಳ್ಳಲು ಶ್ರೀಮತಿ ಜಯಲಕ್ಷ್ಮೀ ತೀನಂಶ್ರೀ ಹೆಸರಿನಲ್ಲಿ ಶ್ರೀ ತೀ. ಶ್ರೀ. ನಾಗಭೂಷಣ ಅವರು 2,000-00 ರೂ.ಗಳನ್ನೂ ತುಮಕೂರಿನ ಶ್ರೀಮತಿ ತುಂಕೂರು ಸುನಂದ ಅವರು 2,000-00 ರೂ.ಗಳನ್ನೂ ದಾನವಾಗಿ ನೀಡಿದ್ದಾರೆ.

### ೫. ಗ್ರಂಥಪ್ರತಿಗಳ ದಾನ :

ಶ್ರೀಭವನ ಕಟ್ಟಡ ನಿಧಿಗೆ ಬಳಸಿಕೊಳ್ಳುವ ಉದ್ದೇಶದಿಂದ ವಿ.ಸೀ. ಸಂಪದದಿಂದ ಶ್ರೀ ಎಂ. ವಿ. ವೆಂಕಟೇಶಮೂರ್ತಿಯವರು, ಶ್ರೀ ಪಿ. ವಿ. ಜೋಶಿಯವರ 'ಕಾವ್ಯಶಾಸ್ತ್ರ ವಿನೋದ' ಪುಸ್ತಕದ 400 ಪ್ರತಿಗಳನ್ನು ದಾನವಾಗಿ ನೀಡಿದ್ದಾರೆ.

ಈ ಬಗೆಯ ದಾನಗಳು ಈ ಮೊದಲೇ ಕೆಲವು ಬಂದಿದ್ದು ಇನ್ನೂ ಕೆಲವರಿಂದ ಕೋರಿಕೆಗಳು ಬಂದಿವೆ. ಇಂಥ ದಾನಗಳನ್ನು ಸ್ವೀಕರಿಸಲು ಪ್ರತಿಷ್ಠಾನಕ್ಕೆ ಸಂತೋಷವೇ ಆದರೂ ಗ್ರಂಥಗಳ ಮಾರಾಟಕ್ಕೆ ಸೂಕ್ತ ವ್ಯವಸ್ಥೆ ಇಲ್ಲದಿರುವುದರಿಂದ ಅವುಗಳ ಮಾರಾಟ ತುಂಬ ನಿಧಾನಗತಿಯಲ್ಲಿ ನಡೆಯುವುದರಿಂದ ಹತ್ತಾರು ವರ್ಷಗಳವರೆಗೆ, ಪ್ರತಿಗಳು ಮಾರಾಟವಾಗುವವರೆಗೆ ದಾನದ ಉದ್ದೇಶವನ್ನು ಈಡೇರಿಸಿಕೊಳ್ಳಲು ಸಾಧ್ಯವಾಗದುದರಿಂದ ಮಾನ್ಯ ದಾನಿಗಳು ಆದಷ್ಟು ಮಟ್ಟಿಗೂ ದ್ರವ್ಯದಾನವನ್ನೇ ನೀಡಿದರೆ ತುಂಬ ಉಪಕಾರವಾಗುತ್ತದೆ.

ಮೇಲ್ಕಂಡ ಎಲ್ಲ ದಾನಿಗಳಿಗೂ ಪ್ರತಿಷ್ಠಾನ ಹೃತ್ಪೂರ್ವಕವಾದ ಕೃತಜ್ಞತೆಗಳನ್ನರ್ಪಿಸುತ್ತದೆ.



**ಸಂಪಾದಕರ ಮನವಿ :**

'ಕರ್ನಾಟಕ ಲೋಚನ' ವಿದ್ವತ್ ಪತ್ರಿಕೆಗೆ ಲೇಖನಗಳನ್ನು ಕಳುಹಿಸುವವರು ಬೆರಳಚ್ಚು ಮಾಡಿದ ಲೇಖನಗಳನ್ನೇ ದಯವಿಟ್ಟು ಕಳುಹಿಸಿ ಕೊಡಬೇಕಾಗಿ ವಿನಂತಿ. ಇದರಿಂದ ಮುದ್ರಣದಲ್ಲಿ ತಪ್ಪುಗಳನ್ನು ನಿಯಂತ್ರಿಸಲು ಸಾಧ್ಯವಾಗುತ್ತದೆ.

# ವಸ್ತು ಸಂಗ್ರಹ

## ೧. ವಿಶೇಷ ಕಾರ್ಯಕ್ರಮಗಳು

**೧. ಕರ್ನಾಟಕ ರತ್ನ ಪ್ರಶಸ್ತಿ :**

'ಕರ್ನಾಟಕ ರತ್ನ' ಕರ್ನಾಟಕ ಸರ್ಕಾರದ ಪ್ರತಿಷ್ಠಿತ ಪ್ರಶಸ್ತಿಯಾಗಿದ್ದರೂ ಸರ್ಕಾರ ಇದನ್ನು ಸಕ್ರಮವಾಗಿ ನೀಡುತ್ತಿಲ್ಲದಿರುವುದು ಈ ಪ್ರಶಸ್ತಿಯ ಗೌರವವನ್ನು ಕಡಿಮೆ ಮಾಡಿದಂತಾಗುತ್ತಿದೆ. ಬೇಕಾದಾಗ ಬೇಕಾದವರಿಗೆ ಕೊಡುವಂತಹ ತಾತ್ಕಾಲಿಕ ಪ್ರಶಸ್ತಿಯಾಗಿ ಪರಿಣಮಿಸುತ್ತಿದೆಯೆಂದು ಭಾಸವಾಗುತ್ತದೆ. ಇದಕ್ಕೆ ಸರ್ಕಾರ ಸೂಕ್ತ ನಿಯಮಾವಳಿಯನ್ನು ರೂಪಿಸದಿದ್ದರೆ, ಅಗತ್ಯ ಪ್ರತಿಷ್ಠೆಯನ್ನು ಕಾಯ್ದುಕೊಳ್ಳದಿದ್ದರೆ ಈ ಪ್ರಶಸ್ತಿಗೆ ಯಾವ ಗೌರವವೂ ಇಲ್ಲದಂತಾಗುತ್ತದೆ. ಕನ್ನಡ ವರನಟ ಡಾ|| ರಾಜ್‌ಕುಮಾರ್ ಮತ್ತು ಮಹಾಕವಿ ಕುವೆಂಪು ಅವರಿಗೆ ಈ ಪ್ರಶಸ್ತಿ ನೀಡಿದ ನಂತರ ಎಷ್ಟೋ ವರ್ಷಗಳ ನಂತರ ಸರ್ಕಾರ ಮರೆತು ಎಚ್ಚರಗೊಂಡಂತೆ ಈ ವರ್ಷ (೨೦೦೧) ಪ್ರಖ್ಯಾತ ವಿಜ್ಞಾನಿ ಡಾ|| ಸಿ. ಎನ್. ಆರ್. ರಾವ್ ಅವರಿಗೆ ಈ ಪ್ರಶಸ್ತಿಯನ್ನು ನೀಡಿ ನಿಜವಾಗಿಯೂ ಪ್ರಶಸ್ತಿಗೆ ಗೌರವವನ್ನು ತಂದಿದೆ.

ಮತ್ತೆ ಈ ಪ್ರಶಸ್ತಿ ನಿದ್ದೆ ಮಾಡುವುದು ಬೇಡ. ಇದಕ್ಕೊಂದು ನಿರ್ದಿಷ್ಟ ನಿಯಮಾವಳಿ, ಆಯ್ಕೆ ಸಮಿತಿ ರಚಿಸಿ ಇದನ್ನೊಂದು ಸ್ವತಂತ್ರ ಸಂಸ್ಥೆಯನ್ನಾಗಿ ಪರಿವರ್ತಿಸಿ ನಿಯತವಾಗಿ ಸಂದಾಯವಾಗುವಂತೆ ನೋಡಿಕೊಳ್ಳಬೇಕಾಗಿದೆ. 'ಭಾರತ ರತ್ನ' ಪುರಸ್ಕಾರದ ಮಾದರಿಯಲ್ಲಿ ಈ 'ಕರ್ನಾಟಕ ರತ್ನ' ಪುರಸ್ಕಾರವೂ ಘನತೆ-ಗೌರವವನ್ನು ಉಳಿಸಿಕೊಂಡು ರಾಷ್ಟ್ರಮಟ್ಟದಲ್ಲಿ 'ಕರ್ನಾಟಕ ರತ್ನ'ಗಳ ಪರಿಚಯವಾಗುವಂತೆ ಆ ಮೂಲಕ ಕರ್ನಾಟಕದ ಕೀರ್ತಿ ಹರಡುವಂತೆ ಮಾಡುವ ಘನತರ ಕರ್ತವ್ಯವನ್ನು ಮಾನ್ಯ ಮುಖ್ಯಮಂತ್ರಿಗಳು ಹಾಗೂ ರಾಜ್ಯ ಸರ್ಕಾರ ಮಾಡುತ್ತದೆಂದು ಲೋಚನ ಆಶಿಸುತ್ತದೆ.

ಶತಾಯುಷಿಗಳಾದ ಎ. ಎನ್. ಮೂರ್ತಿರಾಯರು, ಸದ್ಯದಲ್ಲೇ ಶತಾಯುಷಿ ಆಗಲಿರುವ ನಿಟ್ಟೂರು ಶ್ರೀನಿವಾಸರಾಯರು ಮುಂತಾದ ಅನೇಕ ಅನರ್ಘ್ಯ ರತ್ನಗಳು ಕರ್ನಾಟಕದಲ್ಲಿ ಮಿನುಗುತ್ತಿವೆ. ಸರ್ಕಾರ ಇಂಥವರನ್ನೆಲ್ಲ ಗುರುತಿಸಿ 'ರತ್ನಾಹಾರ' ತೊಡಿಸಿ ರಾಷ್ಟ್ರಕ್ಕೆ, ಜಗತ್ತಿಗೆ ತೋರಿಸಿ ಕೊಡಬೇಕಾಗಿದೆ.

**೨. ಬೆಂಗಳೂರು ಜಿಲ್ಲೆಯ ಹೊಸ ಶೋಧಗಳನ್ನು ಕುರಿತ ವಿಚಾರ ಸಂಕಿರಣ :**

ಕರ್ನಾಟಕ ಇತಿಹಾಸ ಅಕಾಡೆಮಿಯ ನಗರ ಘಟಕ ಮತ್ತು ಮಿಥಿಕ್ ಸೊಸೈಟಿಗಳು ಸಂಯುಕ್ತವಾಗಿ ನಡೆಸಿದ ಈ ವಿಶೇಷ ಕಾರ್ಯಕ್ರಮ ಫೆಬ್ರವರಿ ೧೦, ೧೧ರಂದು ಮಿಥಿಕ್ ಸೊಸೈಟಿಯಲ್ಲಿ ಎಲ್ಲರ ಗಮನ ಸೆಳೆದಿತ್ತು. ಉದ್ಘಾಟನೆ ಸಮಾರೋಪದೊಂದಿಗೆ ಐದು ಗೋಷ್ಠಿಗಳಲ್ಲಿ ನಡೆದ ಈ ವಿಚಾರಗೋಷ್ಠಿಯಲ್ಲಿ ಸಂಯುಕ್ತ ಬೆಂಗಳೂರು ಜಿಲ್ಲೆಯಲ್ಲಿ ಆಗಿರುವ ಹೊಸ ಸಂಶೋಧನೆಗಳನ್ನು ಕುರಿತ ೨೫ಕ್ಕೂ ಹೆಚ್ಚು ಲೇಖನಗಳು ಮಂಡಿತವಾದವು. ಶಿಲ್ಪ, ಶಾಸನ, ಸಾಹಿತ್ಯ, ಸಾಮಾಜಿಕ ಚಟುವಟಿಕೆಗಳೂ, ಸೇವಾ ಸಂಸ್ಥೆಗಳನ್ನು ಕುರಿತ ಅನೇಕ ಹೊಸ ವಿಚಾರಗಳೂ ಇಲ್ಲಿ ಚರ್ಚಿತವಾದವು.

೩. ಹಳಗನ್ನಡ ಕೃತಿ ವಿಲಾಸ :

ಮಲ್ಲೇಶ್ವರದ ಗಾಂಧಿ ಸಾಹಿತ್ಯ ಸಂಘ ನಾಲ್ಕು ವರ್ಷಗಳಿಂದ ನಡೆಸುತ್ತಾ ಬಂದಿದ್ದ ಈ ವಿಶೇಷ ಉಪನ್ಯಾಸ ಮಾಲೆಯ ಸ್ವರ್ಣ ಮಹೋತ್ಸವವನ್ನು ಮೇ ೧೩ ಮತ್ತು ೧೪ರಂದು ವಿಶೇಷವಾಗಿ ನಡೆಸಿತು. ಪ್ರಮುಖ ಹಳಗನ್ನಡ ಕಾವ್ಯಗಳ ವಾಚನ, ವ್ಯಾಖ್ಯಾನ, ಗಮಕರೂಪಕಗಳ ಮೂಲಕ ಕಾವ್ಯಾಭ್ಯಾಸಿಗಳಿಗೆ ರಸದೌತಣವನ್ನು ನೀಡಿತು. ೧೩-೩-೧೯೯೭ರಂದು ಹಳಗನ್ನಡ ಕಾವ್ಯಪ್ರಿಯರಾಗಿದ್ದ ಜಿ. ಪಿ. ರಾಜರತ್ನಂ ಅವರ ಸ್ಮರಣೆಯಿಂದ ಆರಂಭವಾಗಿದ್ದ ಈ ವಿಶೇಷ ಉಪನ್ಯಾಸ ಮಾಲೆಯನ್ನು ಪ್ರತಿ ತಿಂಗಳೂ ತಪ್ಪದೆ ನಡೆಸಿ ೫೦ ಉಪನ್ಯಾಸಗಳನ್ನು ಪೂರೈಸಿದ ಸಾಧನೆಗೆ ಗಾಂಧಿ ಸಾಹಿತ್ಯ ಸಂಘ ಭಾಜನವಾಗಿದೆ. ಈ ಮಾಲೆಯ ಸಂಚಾಲಕರಾದ ಪ್ರೊ|| ಎಚ್. ವಿ. ಶ್ರೀನಿವಾಸಶರ್ಮ ಅಭಿನಂದನೆಗೆ ಪಾತ್ರರಾಗಿದ್ದಾರೆ.

ಹಳಗನ್ನಡ ಅಧ್ಯಯನದ ಬಗೆಗೆ ಆಸಕ್ತಿಯೇ ಕಡಿಮೆ ಆಗುತ್ತಿರುವ ಈ ಕಾಲದಲ್ಲಿ ಅದರ ಬಗ್ಗೆ ಕಾಳಜಿ ಮೂಡಲು, ನವಪೀಳಿಗೆ ಅತ್ತ ಆಕರ್ಷಿತರಾಗಲು ಇಂತಹ ಕಾರ್ಯಕ್ರಮಗಳು ಅಗತ್ಯವಾಗಿವೆ.

## (೨) ಸನ್ಮಾನಗಳು

೧. ಡಾ|| ಜಿ. ಎಸ್. ಎಸ್. ನಮನ :

ಹಿರಿಯ ಕವಿ, ವಿಮರ್ಶಕ, ಪಂಪಪ್ರಶಸ್ತಿ ವಿಜೇತ ಡಾ|| ಜಿ. ಎಸ್. ಶಿವರುದ್ರಪ್ಪ ಅವರಿಗೆ ಮೇ ೨೬ರಂದು ನಗರದ ಸೆನೆಟ್ ಸಭಾಂಗಣದಲ್ಲಿ ಅರ್ಥಪೂರ್ಣ 'ಗೌರವ' ಸಲ್ಲಿಸಲಾಯಿತು. ಬೆಂ.ವಿ.ವಿ. ಪದವಿ ಕಾಲೇಜು ಕನ್ನಡ ಅಧ್ಯಾಪಕರ ಒಕ್ಕೂಟವು ಕಾಮಧೇನು ಪುಸ್ತಕ ಭವನ, ಅಭಿನವ ಪ್ರಕಾಶನ ಮತ್ತು ಅಂಕಣ ಗೆಳೆಯರ ಬಳಗಗಳ ಸಹಕಾರದಲ್ಲಿ ನಡೆಸಿದ ಈ ವಿಶಿಷ್ಟ ಕಾರ್ಯಕ್ರಮದಲ್ಲಿ ಜಿಎಸ್‌ಎಸ್ ಸಾಹಿತ್ಯ ಸಾಧನೆ ಕುರಿತ ವಿಚಾರಗೋಷ್ಠಿ ಮತ್ತು ಕವಿಗೋಷ್ಠಿಗಳು ನಡೆದವಲ್ಲದೆ, 'ಗೌರವ' ಎಂಬ ಅಭಿನಂದನ ಗ್ರಂಥವನ್ನು ಬಿಡುಗಡೆ ಮಾಡಲಾಯಿತು.

೨. ಡಾ|| ಸಾ. ಶಿ. ಮರುಳಯ್ಯ ಅಭಿನಂದನೆ :

ಕನ್ನಡ ಸಾಹಿತ್ಯದಲ್ಲಿ ತಮ್ಮದೇ ಆದ ಛಾಪು ಮೂಡಿಸಿರುವ ಕವಿ, ವಿಮರ್ಶಕ ಡಾ|| ಸಾ. ಶಿ. ಮರುಳಯ್ಯ ಅವರಿಗೆ ೭೦ನೇ ವರ್ಷದ ನೆನಪಿಗಾಗಿ ಅಭಿಮಾನಿಗಳು, ಬಂಧುಗಳು ಸೇರಿ 'ಡಾ|| ಸಾ. ಶಿ. ಮ. ಅಭಿನಂದನ ಸಮಿತಿ' ಮೂಲಕ ನಗರದ ಪುರಭವನದಲ್ಲಿ ಅದ್ದೂರಿಯಾಗಿ ಅಭಿನಂದಿಸಿದರು. ಅಭಿನಂದನ ಸಮಿತಿಯಿಂದ ನೆನಪಿನ ಕಾಣಿಕೆ, ಅಭಿನಂದನ ಗ್ರಂಥದೊಂದಿಗೆ ಸಾಶಿಮರ ಸಮಗ್ರ ಸಾಹಿತ್ಯದ ಐದು ಸಂಪುಟಗಳನ್ನು ಸಪ್ನ ಬುಕ್ ಸ್ಟಾಲ್‌ನ ಸಹಕಾರದೊಂದಿಗೆ ಸಮರ್ಪಿಸಿದುದು ಈ ಸಮಾರಂಭದ ವಿಶೇಷತೆಯಾಗಿತ್ತು. ಹಾಗೆಯೇ ಶಿಷ್ಯರ ಪ್ರೀತಿಯ ಮಹಾಪೂರವೂ ವಿಶಿಷ್ಟವಾಗಿದ್ದು ಬೃಹತ್ ಗುಲಾಬಿ ಹಾರಗಳು, ಚಿನ್ನ ಬೆಳ್ಳಿಯ ಕಾಣಿಕೆಗಳೂ ಸಂದಾಯವಾದವು.

## (೩) ಶತಮಾನೋತ್ಸವಗಳು

೧. ಶತಾಯುಷಿ ಡಾ|| ಎ. ಎನ್. ಮೂರ್ತಿರಾಯರಿಗೆ ಶುಭಾಶಯ :

೧೦೨ನೇ ವರ್ಷದಲ್ಲಿ ಮುನ್ನಡೆಯುತ್ತಿರುವ ಹಿರಿಯ ಸಾಹಿತಿಗಳೂ, ಪಂಪ ಪ್ರಶಸ್ತಿ ವಿಜೇತರೂ ಆದ ಡಾ|| ಎ. ಎನ್. ಮೂರ್ತಿರಾಯರಿಗೆ 'ಪ್ರತಿಷ್ಠಾನ' 'ಲೋಚನ'

ತನ್ನ ಹೃತ್ಪೂರ್ವಕ ಶುಭಾಶಯಗಳನ್ನು ಸಲ್ಲಿಸುತ್ತದೆ. ಕಳೆದ ವರ್ಷ ೧೦೦ ತುಂಬಿದ ಸಂದರ್ಭದಲ್ಲಿ ಸರ್ಕಾರ, ಸಂಘ-ಸಂಸ್ಥೆಗಳು ಸೂಕ್ತ ರೀತಿಯಲ್ಲಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದವಾದರೂ ಅವರ ಸಾಹಿತ್ಯ-ಸಾಧನೆ-ಪರಾಮರ್ಶೆ ಕುರಿತಂತೆ ವಿಶೇಷ ಕಾರ್ಯಕ್ರಮಗಳಾಗಲೀ ಜೀವಂತವಾಗಿ ಶತಮಾನೋತ್ಸವ ಕಾಣುತ್ತಿರುವ ಕನ್ನಡದ ಏಕೈಕ ವಿಶೇಷ ಸಂದರ್ಭವಾಗಿ ಇದನ್ನು ಪರಿಗಣಿಸಿ ವ್ಯವಸ್ಥಿತ ಶತಮಾನೋತ್ಸವಾಚರಣೆಯಾಗಲಿ, ಒಂದು ನೆನಪಿನ ವಿಶೇಷ ಗ್ರಂಥ ಪ್ರಕಟಣೆಯಾಗಲಿ, ಆಗದಿರುವುದು ಆಶ್ಚರ್ಯವಾಗಿದೆ.

ಅಭಿಮಾನಿಗಳು, ಸಾಹಿತ್ಯಾಸಕ್ತರು, ಸರ್ಕಾರ ಈ ಬಗ್ಗೆ ಪರ್ಯಾಲೋಚಿಸಿ ಈಗಲಾದರೂ ಎ. ಎನ್. ಮೂರ್ತಿರಾಯರ ಶತಮಾನೋತ್ಸವಾಚರಣೆಗೆ ಒಂದು ಪೂರ್ಣ ಪ್ರಮಾಣದ ಸಮಿತಿ ರಚಿಸಿ ಈ ಕೊರತೆಗಳನ್ನು ತುಂಬುವ ಮೂಲಕ ಮುಂದಿನ ಪೀಳಿಗೆಗೆ ಸಾಹಿತ್ಯ-ಸಂಸ್ಕೃತಿಯನ್ನು ಉಳಿಸುವ ಮಾದರಿಯನ್ನು ರೂಪಿಸುವಂತಾಗಲಿ ಎಂದು ಪ್ರತಿಷ್ಠಾನ ಆಶಿಸುತ್ತದೆ.

**೨. ಸೇಡಿಯಾಪು ಕೃಷ್ಣಭಟ್ಟ ಜನ್ಮಶತಮಾನೋತ್ಸವ ಸಮಿತಿ :**

ಕನ್ನಡದ ಪ್ರಸಿದ್ಧ ವಿದ್ವಾಂಸರಾಗಿದ್ದ ಪಂಪಪ್ರಶಸ್ತಿ ವಿಜೇತ, ವಿದ್ವಾನ್ ಸೇಡಿಯಾಪು ಕೃಷ್ಣಭಟ್ಟರ ಜನ್ಮಶತಮಾನೋತ್ಸವ ಜೂನ್ ೮ರಿಂದ ಆರಂಭವಾಗಿದ್ದು ಈ ಉತ್ಸವಾಚರಣೆಗಾಗಿ ಮೇಲ್ಕಂಡ ಸಮಿತಿಯು ರಚನೆಗೊಂಡು ಉಡುಪಿಯ ರಾಷ್ಟ್ರಕವಿ ಗೋವಿಂದಪೈ ಸಂಶೋಧನ ಕೇಂದ್ರದಲ್ಲಿ ಕಾರ್ಯ ನಿರ್ವಹಿಸುತ್ತಿದೆ. ವೀರೇಂದ್ರ ಹೆಗಡೆಯವರ ಗೌರವಾಧ್ಯಕ್ಷತೆಯಲ್ಲಿ, ಕೆ. ಕೆ. ಪೈ. ಅಧ್ಯಕ್ಷರಾಗಿ, ವರ್ಮಾ ಲಕ್ಷ್ಮೀನಾರಾಯಣ ಆಳ್ವ ಕಾರ್ಯಾಧ್ಯಕ್ಷರಾಗಿ ಕವಿ ಕಯ್ಯಾರ ಕಿಞ್ಞಣ್ಣ ರೈ, ಹರಿಕೃಷ್ಣ ಪುನರೂರು ಮುಂತಾದ ಗಣ್ಯರು ಉಪಾಧ್ಯಕ್ಷರಾಗಿದ್ದು ಪ್ರೊ|| ಎಂ. ರಾಮಚಂದ್ರ ಪ್ರಧಾನ ಕಾರ್ಯದರ್ಶಿಗಳಾಗಿರುವ ಈ ಸಮಿತಿ ಇಡೀ ವರ್ಷ ನಾಡಿನಾದ್ಯಂತ ಅರ್ಥಪೂರ್ಣವಾಗಿ ಕೃಷ್ಣಭಟ್ಟರ ಸಾಹಿತ್ಯ-ಸಾಧನೆಗಳನ್ನು ಜನತೆಗೆ ಪರಿಚಯಿಸುವ ಸಂಕಲ್ಪ ತೊಟ್ಟಿದೆ.

ನಾಡಿನ ಅನೇಕ ಸಂಘ-ಸಂಸ್ಥೆಗಳನ್ನು, ಸಾರ್ವಜನಿಕರನ್ನು ಇದರ ಯಶಸ್ಸಿಗೆ ವಿನಂತಿಸಿಕೊಂಡಿದ್ದು, ಕೃಷ್ಣಭಟ್ಟರ ವ್ಯಕ್ತಿತ್ವ ಸಾಹಿತ್ಯ ಸಾಧನೆ ಕುರಿತ ಉಪನ್ಯಾಸ ವಿಚಾರಗೋಷ್ಠಿ ಇತ್ಯಾದಿಗಳನ್ನು ನಡೆಸಲು ಕೋರಿದೆ.

ಸೇಡಿಯಾಪು ಕೃಷ್ಣಭಟ್ಟರು ಮುಖ್ಯವಾಗಿ ವ್ಯಾಕರಣ ಛಂದಶ್ಶಾಸ್ತ್ರಕಾರರಾದರೂ ಪ್ರಥಮ ಮಟ್ಟದ ಶ್ರೇಷ್ಠ ಸಂಶೋಧಕರೂ ಆಗಿ ಕನ್ನಡ ವಿದ್ವತ್ ಕ್ಷೇತ್ರಕ್ಕೆ ಅಚ್ಚಳಿಯದ ಕೊಡುಗೆ ನೀಡಿದ್ದಾರೆ. ಕಾವ್ಯ, ಸಣ್ಣಕಥೆ, ವ್ಯಾಕರಣ, ಛಂದಸ್ಸು, ಸಂಶೋಧನೆ ಹೀಗೆ ಹಲವು ಕ್ಷೇತ್ರಗಳಲ್ಲಿ ಛಾಪು ಮೂಡಿಸಿರುವ ಸೇಡಿಯಾಪು ಅವರ ಧೀಮಂತ ವ್ಯಕ್ತಿತ್ವವನ್ನು ಸಾಂಸ್ಕೃತಿಕ ಕೊಡುಗೆಯನ್ನು ಕರ್ನಾಟಕಕ್ಕೆ ಪರಿಚಯಿಸಬೇಕಾದದ್ದು ಈ ಸಂದರ್ಭದಲ್ಲಿ ಅತ್ಯಗತ್ಯವಾಗಿದೆ. ಸಮಿತಿಯ ಯೋಜನೆಗಳು ಯಶಸ್ವಿಯಾಗಲಿ ಎಂದು ಆಶಿಸುತ್ತೇವೆ. ಪ್ರತಿಷ್ಠಾನದ ಹಿತೈಷಿಗಳೂ, ಗೌರವ ಸದಸ್ಯರೂ ಲೋಚನದ ಗೌರವಾನ್ವಿತ ಲೇಖಕರೂ ಆಗಿದ್ದ ಸೇಡಿಯಾಪು ಅವರ ಜನ್ಮ ಶತಮಾನೋತ್ಸವವನ್ನು ಪ್ರತಿಷ್ಠಾನವೂ ಸೂಕ್ತ ರೀತಿಯಲ್ಲಿ ಆಚರಿಸಲು ಆಲೋಚಿಸುತ್ತಿದೆ.

**– ವ್ಯವಸ್ಥಾಪಕ ಸಂಪಾದಕ**

# ಅಭಿನಂದನೆ

೧. ಬಸವ ಪುರಸ್ಕಾರ :

ಸರ್ಕಾರ ನೀಡುವ ಬಸವ ಪುರಸ್ಕಾರದ ಪ್ರಥಮ ಗೌರವ ಶ್ರೀಮತಿ 'ಸರಸ್ವತಿ ಭುವನ' ಅವರಿಗೆ ಸಂದಿದೆ. ಈ ಪ್ರಶಸ್ತಿಯ ಮೊತ್ತ 1,50,000 ರೂ.ಗಳಾಗಿದ್ದು ಕರ್ನಾಟಕ ಸರ್ಕಾರ ಆರಂಭ ಮಾಡಿರುವ ರಾಷ್ಟ್ರಮಟ್ಟದ ಪ್ರಶಸ್ತಿ ಇದಾಗಿದೆ.

೨. ಹಂಪೆ ವಿಶ್ವವಿದ್ಯಾಲಯ ಕುಲಪತಿ :

ಪ್ರಸಿದ್ಧ ಸಾಹಿತಿಗಳೂ, ಜನಪದ ವಿದ್ವಾಂಸರೂ, ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರೂ ಆಗಿದ್ದ ಮೈಸೂರಿನ ಡಾ|| ಹೆಚ್. ಜೆ. ಲಕ್ಕಪ್ಪಗೌಡರು ಕನ್ನಡ ವಿಶ್ವವಿದ್ಯಾಲಯ, ಹಂಪೆಯ ಕುಲಪತಿಗಳಾಗಿ ನೇಮಕಗೊಂಡಿದ್ದಾರೆ.

೩. ಅಕಾಡೆಮಿ ಹಾಗೂ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರುಗಳ ನೇಮಕ :

ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾಗಿ ಪ್ರೊ|| ಮಲ್ಲೇಪುರಂ ಜಿ. ವೆಂಕಟೇಶ್, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಡಾ|| ಗುರುಲಿಂಗ ಕಾಪಸೆ, ನಾಟಕ ಅಕಾಡೆಮಿಯ ಅಧ್ಯಕ್ಷರಾಗಿ ಶ್ರೀ ಆರ್. ನಾಗೇಶ್, ಸಂಗೀತ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿ ಹೆಚ್. ಆರ್. ಲೀಲಾವತಿ, ಜಾನಪದ ಅಕಾಡೆಮಿಯ ಅಧ್ಯಕ್ಷರಾಗಿ ಹೀ. ಚಿ. ರಾಮಚಂದ್ರಗೌಡ ಆಯ್ಕೆಯಾಗಿದ್ಧಾರೆ.

೪. ಮಾಸ್ತಿ ಪ್ರಶಸ್ತಿ :

ಮಾಸ್ತಿ ವೆಂಕಟೇಶ ಅಯ್ಯಂಗಾರ್ ಪ್ರಶಸ್ತಿ ಸಮಿತಿ ವತಿಯಿಂದ ಡಾ|| ಎಂ. ಚಿದಾನಂದಮೂರ್ತಿ ಅವರಿಗೆ ಈ ಪ್ರಶಸ್ತಿ ಸಂದಿದೆ.

೫. ಡಾ|| ಜಿ. ಎಸ್. ಎಸ್. ಪ್ರಶಸ್ತಿ :

ಅರಿಸ್ಟಾಟಲ್‌ನ ಕಾವ್ಯ ಮೀಮಾಂಸೆಯನ್ನು ಅತ್ಯಂತ ಸಮರ್ಪಕವಾಗಿ ಮೂಲಕ್ಕೆ ಧಕ್ಕೆ ಆಗದಂತೆ ಓದುಗರಿಗೆ ಸುಲಭವಾಗಿ ಅರ್ಥವಾಗುವಂತೆ ಕನ್ನಡಕ್ಕೆ ತಂದುಕೊಟ್ಟ ನಿವೃತ್ತ ಇಂಗ್ಲೀಷ್ ಪ್ರಾಧ್ಯಾಪಕರಾದ ಖ್ಯಾತ ವಿದ್ವಾಂಸ ಪ್ರೊ|| ಎನ್. ಬಾಲಸುಬ್ರಹ್ಮಣ್ಯ ಅವರಿಗೆ ಈ ವರ್ಷದ ಪ್ರಶಸ್ತಿ ಲಭಿಸಿದೆ.

೬. ಡಾ|| ಜಿ.ಶಂ.ಪ. ಪ್ರಶಸ್ತಿ :

ಡಾ|| ಜಿ.ಶಂ.ಪ. ಸಾಹಿತ್ಯ ವೇದಿಕೆ ಕೊಡಮಾಡುವ ಡಾ|| ಜಿ.ಶಂ.ಪ. ಜಾನಪದ ಪ್ರಶಸ್ತಿಯು ಪ್ರತಿಷ್ಠಾನದ ವ್ಯವಸ್ಥಾಪಕ ಕಾರ್ಯದರ್ಶಿಗಳೂ, ಜಾನಪದ ವಿದ್ವಾಂಸರೂ ಆದ ಪ್ರೊ|| ಡಿ. ಲಿಂಗಯ್ಯ ಅವರಿಗೆ ಹಾಗೂ ಇನ್ನೊಬ್ಬ ಜಾನಪದ ತಜ್ಞರಾದ ಡಾ|| ಪಿ. ಕೆ. ರಾಜಶೇಖರ್ ಅವರಿಗೆ ಲಭಿಸಿದೆ.

**೭. ವಿಶ್ವೇಶ್ವರಯ್ಯ ಪ್ರಶಸ್ತಿ, ಪುರಸ್ಕಾರಗಳು :**

ವಿಶ್ವೇಶ್ವರಯ್ಯ ಇಂಜಿನಿಯರಿಂಗ್ ಪ್ರತಿಷ್ಠಾನವು ಸಾಹಿತ್ಯ, ಕಲೆ, ಸಹಕಾರ, ಶಿಕ್ಷಣ, ಸಮಾಜಸೇವೆ ಮುಂತಾದ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ 10 ಜನರಿಗೆ **'ನವರತ್ನ ಪ್ರಶಸ್ತಿ'**ಯನ್ನು ನೀಡಿ ಗೌರವಿಸಿದೆ. (ಶ್ರೀ ಅ. ರಾ. ಚಂದ್ರಹಾಸಗುಪ್ತ, ಶ್ರೀ ಎ. ಎಸ್. ಮೂರ್ತಿ, ಶ್ರೀಮತಿ ಸುಧಾ ಮೂರ್ತಿ, ಶ್ರೀ ಬಿ. ವಿ. ಶಿರೂರು, ಶ್ರೀ ಸಿ. ಆರ್. ರಾಜು, ಡಾ॥ ವಿ. ಎಸ್. ಸ್ಕಂದ ಪ್ರಸಾದ್, ಶ್ರೀ ಎಸ್. ಅಶೋಕಬಾಬು, ಶ್ರೀ ಬಿ. ವಿ. ವೀರಭದ್ರಪ್ಪ, ಶ್ರೀ ಎಸ್. ಮಲ್ಲಿಕಾರ್ಜುನಯ್ಯ, ಡಾ॥ ವಿ. ಪರಮೇಶ್ವರ) ಜೊತೆಗೆ 14 ಜನರಿಗೆ ವಿಶ್ವೇಶ್ವರಯ್ಯ ಪುರಸ್ಕಾರವನ್ನೂ ನೀಡಿದೆ. (ಶ್ರೀ ಬಸವರಾಜ ಕಾಶಪ್ಪಮಟಗಾರ, ಶ್ರೀಮತಿ ಗುಡಿಬಂಡೆ ಪೂರ್ಣಿಮಾ, ಶ್ರೀ ಎಸ್. ವಿ. ಶ್ರೀನಿವಾಸರಾವ್, ಶ್ರೀ ಸುರೇಶ ಕುಲಕರ್ಣಿ, ಶ್ರೀ ಎನ್. ಎಸ್. ನಾಗರಾಜ್, ಶ್ರೀಮತಿ ಲತಾಗುತ್ತಿ, ಶ್ರೀ ಅಪ್ಪಗೆರೆ ತಿಮ್ಮರಾಜು, ಶ್ರೀ ಮನೋಹರ ಮಸ್ಕಿ, ಶ್ರೀ ಜಿ. ಬಿ. ಪಾಟೀಲ, ಶ್ರೀ ಡಿ. ಜಿ. ಸಾಗರ, ಶ್ರೀ ಜೆ. ಆರ್. ಕೆ. ಕರಡಿ, ಶ್ರೀ ಡಿ. ಎಸ್. ಚೌಗಲೆ, ಶ್ರೀ ಆನಂದ ಅಪ್ಪುಗೋಳ, ಶ್ರೀ ಎಸ್. ಎಂ. ಬೆಳಗಲಿ) ಹಾಗೆಯೇ 4 ಜನರಿಗೆ **ವಿಶ್ವೇಶ್ವರಯ್ಯ ಸಾಹಿತ್ಯ ಪ್ರಶಸ್ತಿ**ಯನ್ನು ನೀಡಿ ಗೌರವಿಸಿದೆ. (ಶ್ರೀಮತಿ ನೇಮಿಚಂದ್ರ, ಶ್ರೀ ನಾಗೇಶ ಹೆಗ್ಗಡೆ, ಶ್ರೀ ಬಿ. ಜಿ. ಸತ್ಯಮೂರ್ತಿ, ಶ್ರೀ ಜಿ. ಜೆ. ಹರಿಜಿತ್)

**೮. ಆರ್ಯಭಟ ಪ್ರಶಸ್ತಿ :**

ಆರ್ಯಭಟ ಸಾಂಸ್ಕೃತಿಕ ಸಂಸ್ಥೆಯು ಸಾಹಿತ್ಯ, ನೃತ್ಯ, ಸಂಗೀತ, ರಂಗಭೂಮಿ, ವೈದ್ಯ, ಜ್ಯೋತಿಷ್ಯ ಮುಂತಾದ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿರುವ 17 ಜನರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ. (ಡಾ॥ ಹೆಚ್. ಜೆ. ಲಕ್ಕಪ್ಪಗೌಡ, ಶ್ರೀ ಎಸ್. ವಿ. ಶ್ರೀನಿವಾಸರಾವ್, ಡಾ॥ ನಿರುಪಮಾ, ಪ್ರೊ॥ ಎಂ. ಆರ್. ದೊರೆಸ್ವಾಮಿ, ಶ್ರೀ ಯಶವಂತ ಹಳಬಂಡಿ, ಶ್ರೀ ಎಸ್. ಎನ್. ನಿಧೀಶ್, ಶ್ರೀ ಬಿ. ರಾಮಚಂದ್ರ ಆಚಾರ್ಯ, ಶ್ರೀ ಶಿವರಾಂ, ವಿಶ್ವೇಶ್ವರಭಟ್, ಶ್ರೀ ಡಿ. ವಿ. ಸುಧೀಂದ್ರ, ಶ್ರೀ ಆರ್. ಕೆ. ಪ್ರಕಾಶ್, ಶ್ರೀ ರತ್ನಾಕರ್, ಶ್ರೀ ಟಿ. ವಿ. ಲಕ್ಷ್ಮೀನರಸಿಂಹಯ್ಯ, ಶ್ರೀ ಎಂ. ಜಿ. ಕೃಷ್ಣಮೂರ್ತಿ).

**ಯುವ ಪ್ರಶಸ್ತಿ :** ಮಾಸ್ಟರ್ ಎಂ. ಕೆ. ನಿತಿನ್, ಮಾಸ್ಟರ್ ಆರ್. ಶೇಖರ್, ಕುಮಾರಿ ಎಂ. ನವ್ಯ, ಕುಮಾರಿ ನಮಿತಾ ಬಿ. ರಾವ್, ಕುಮಾರಿ ಎನ್. ಸಿಂಧೂ ಹೆಬ್ಬಾರ್, ಕುಮಾರಿ ಲಕ್ಷ್ಮಿ. ಡಿ. ರಾವ್, ಕುಮಾರಿ ಎಸ್. ಚೈತ್ರಶ್ರೀ, ಮಾಸ್ಟರ್ ಡಿ. ಚೇತನ್, ಮಾಸ್ಟರ್ ಕರುಣ್ ಕೃಷ್ಣ ಮತ್ತು 22 ಕಿರುತೆರೆ ಕಲಾವಿದರಿಗೆ ಪ್ರಶಸ್ತಿ ನೀಡಿ ಗೌರವಿಸಿತು.

೧೦. 'ಜಾನಪದ ತಜ್ಞ'

ವಿದ್ವಾನ್ ಟಿ. ಕೇಶವಭಟ್ ಮತ್ತು ಇತರ ನಾಲ್ವರು ಜಾನಪದ ವಿದ್ವಾಂಸರನ್ನು ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ 2000ನೇ ಸಾಲಿಗೆ 'ಜಾನಪದ ತಜ್ಞ' ಗೌರವವನ್ನು ನೀಡಿ ಪುರಸ್ಕರಿಸಿದೆ. 5000 ರೂ.ಗಳ ಮೊತ್ತದ ಈ ಗೌರವ ಪ್ರಶಸ್ತಿ ಪ್ರಶಸ್ತಿಫಲಕವನ್ನೊಳಗೊಂಡಿರುತ್ತದೆ. ಕೇಶವಭಟ್ಟರು ಜಾನಪದ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದ್ದು ಅವರ 'ದಕ್ಷಿಣ ಕನ್ನಡ ಜಿಲ್ಲೆಯ ಜಾನಪದ ಗೀತೆಗಳು' ಮತ್ತು 'ಗೋವಿನ ಕಥಾ ಸಾಹಿತ್ಯ' ಗಮನಾರ್ಹ ಸಂಕಲನಗಳು. ಅವರ ಸಂಗ್ರಹದಲ್ಲಿ ಇನ್ನೂ ಸಾವಿರಾರು ಅಪ್ರಕಟಿತ ಜಾನಪದ ಗೀತೆಗಳು ಹಸ್ತಪ್ರತಿ ರೂಪದಲ್ಲಿದ್ದು ಅವೆಲ್ಲ ಆದಷ್ಟೂ ಬೇಗ ಬೆಳಕು ಕಾಣಬೇಕಾದ ಅಗತ್ಯವಿದೆ.

ಪ್ರತಿಷ್ಠಾನದ ಲೋಚನದ ಸಂಪಾದಕರೂ ಆಗಿ ಸೇವೆ ಸಲ್ಲಿಸಿದ್ದ ಕೇಶವಭಟ್ಟರು ವೈಯಾಕರಣಿಗಳೂ, ಛಂದಶ್ಶಾಸ್ತ್ರಜ್ಞರೂ, ಛಂದೋಬದ್ಧ ಕವಿಗಳೂ ಆಗಿದ್ದಾರೆ.

ಟಿ.ಎಸ್.ಆರ್. ಪ್ರಶಸ್ತಿ

೨೭/೩/೨೦೦೧ರಂದು ೨೦೦೦ನೇ ಸಾಲಿನ 'ಟಿ.ಎಸ್.ಆರ್. ಪ್ರಶಸ್ತಿ'ಯನ್ನು ಪತ್ರಿಕಾ ಅಕಾಡೆಮಿಯ ಮಾಜಿ ಅಧ್ಯಕ್ಷ ಶ್ರೀ ಎಸ್. ಜಿ. ಮೈಸೂರು ಮಠ ಅವರಿಗೆ ನೀಡಿದೆ. ಶ್ರೀಯುತರು ಡೆಕ್ಕನ್ ಹೆರಾಲ್ಡ್ ಪತ್ರಿಕೆಯಲ್ಲಿ ೨೫ ವರ್ಷಕ್ಕೂ ಹೆಚ್ಚು ಕಾಲ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ.

ಈ ಎಲ್ಲ ಮಹನೀಯರಿಗೂ ಪ್ರತಿಷ್ಠಾನ-ಲೋಚನ ತನ್ನ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.



# ಶ್ರದ್ಧಾಂಜಲಿ

**೧. ಎನ್. ಎಸ್. ಚಿದಂಬರರಾವ್ :**

ದಿನಾಂಕ 6-1-2001ರಂದು ನಿಧನರಾದ ಸೃಜನಶೀಲ ಸಾಹಿತಿ, ಖ್ಯಾತ ಲೇಖಕ, ಕಥೆಗಾರ ಎನ್. ಎಸ್. ಚಿದಂಬರರಾವ್ (ಜನನ 28-9-1936) ತಮ್ಮ ಉತ್ಕೃಷ್ಟ ಕಥೆಗಳಿಂದ ಸಾಂಸ್ಕೃತಿಕ ಲೋಕದಲ್ಲಿ ಬಹಳ ಪ್ರಸಿದ್ಧರಾಗಿದ್ದರು. ಉಪಾಧ್ಯಾಯ ವೃತ್ತಿಯನ್ನು ಕೈಗೊಂಡು ಜೊತೆಜೊತೆಯಲ್ಲೇ ಸಾಹಿತ್ಯ ರಚನೆಯಲ್ಲಿ ತೊಡಗಿ ಯಶಸ್ಸುಗಳಿಸಿದ್ದರು. ಸುಮಾರು 275ಕ್ಕೂ ಹೆಚ್ಚು ಕಥೆಗಳನ್ನು ರಚಿಸಿರುವುದು ಇವರ ಹೆಗ್ಗಳಿಕೆ. ಇವರ ಕಥೆಗಳು ಕನ್ನಡದ ಎಲ್ಲಾ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಇವರ ಸೇವೆಯನ್ನು ಮೆಚ್ಚಿ ಚಳ್ಳಕೆರೆ, ಸಂತೆಬೆನ್ನೂರು, ಮಲ್ಲಾಡಿಹಳ್ಳಿ ಮುಂತಾದೆಡೆ ಇವರನ್ನು ಅಭಿಮಾನಿಗಳು ಸನ್ಮಾನಿಸಿದ್ದಾರೆ. ರಾಷ್ಟ್ರೋತ್ಥಾನ ಪರಿಷತ್ತು ಸಹ ಸನ್ಮಾನಿಸಿದೆ. ಇವರ ಮುಖ್ಯ ಕೃತಿಗಳು ಸಿರಿಯರ ತೆರೆಗಳು (ಕಥಾಸಂಕಲನ), ಕತೆಗಳು (1981), ಅಲೆಗಳು (ಸಂಪಾದನೆ), ಬೆಂಕಿಯ ನೆರಳು, ನಿರ್ದೇಶನ (ಕಾದಂಬರಿಗಳು) ಎಚ್ಚಮನಾಯಕ (ಜೀವನಚಿತ್ರ) ಮುಂತಾದವು.

**೨. ಬಿ. ಎಸ್. ಸುಬ್ಬರಾಯ :**

ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆಗಳ ಸಹಕಾರ್ಯದರ್ಶಿಯಾಗಿ ಅದರ ಇಡೀ ನಿರ್ವಹಣೆಯ ಹೊಣೆಯನ್ನು ಮೂರು ದಶಕಗಳಿಗೂ ಮೀರಿ ನಿರ್ವಹಿಸುತ್ತಿದ್ದ ಬಿ. ಎಸ್. ಸುಬ್ಬರಾಯರು ದಿನಾಂಕ ನಿಧನರಾದರು. ಸಂಸ್ಥಾಪಕ ಡಿ.ವಿ.ಜಿ.ಯವರ ಕೈಕೆಳಗೆ ಪಳಗಿದ್ದ ದಿವಂಗತರು ನಂತರ ನಿಟ್ಟೂರು ಶ್ರೀನಿವಾಸರಾಯರ ಮಾರ್ಗದರ್ಶನದಲ್ಲಿ ಗೋಖಲೆ ಸಂಸ್ಥೆಯನ್ನು ಸಂರಕ್ಷಿಸುತ್ತಿದ್ದರು. ಸಂಸ್ಥೆಯ ಬಗೆಗಿನ ಅವರ ಅಚಲವಾದ ನಿಷ್ಠೆ, ಪ್ರಾಮಾಣಿಕತೆ, ಶ್ರದ್ಧೆ ಮತ್ತು ಆಸಕ್ತಿಗಳು ಇಂತಹ ಸೇವಾಸಕ್ತರಿಗೆ ಆದರ್ಶಪ್ರಾಯವಾದುದಾಗಿತ್ತು.

**೩. ಜಯಲಕ್ಷ್ಮಮ್ಮ ತೀನಂಶ್ರೀ :**

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಮರೆಯಲಾಗದ ಮಹಾನುಭಾವರಾಗಿದ್ದ ಪ್ರಸಿದ್ಧ ವಿದ್ವಾಂಸ - ಕವಿ ಪ್ರೊ॥ ತೀ. ನಂ. ಶ್ರೀಕಂಠಯ್ಯನವರ ಧರ್ಮಪತ್ನಿ ಶ್ರೀಮತಿ ಜಯಲಕ್ಷ್ಮಮ್ಮ ಅವರು 8-2-2001ರಂದು ಪುತ್ರ ತೀ. ಶ್ರೀ. ನಾಗಭೂಷಣ ಅವರ ನಿವಾಸದಲ್ಲಿ ತೀನಂಶ್ರೀಯವರನ್ನು ಸೇರಿಕೊಂಡರು. ಪುತ್ರರಾದ ನಾಗಭೂಷಣ ಪ್ರತಿಷ್ಠಾನದ ಸ್ಥಾಪಕ ಸದಸ್ಯರೂ ಹಿತೈಷಿಗಳೂ ದಾನಿಗಳೂ ಕಾರ್ಯಸಮಿತಿ ಸದಸ್ಯರೂ ಆಗಿ ಪ್ರತಿಷ್ಠಾನದ ಬೆಳವಣಿಗೆಯನ್ನು ಸಕ್ರಿಯವಾಗಿಸಿದ್ದಾರೆ. ಈ ಮೂಲಕ ತೀನಂಶ್ರೀಯವರ ವಿದ್ವತ್ ಸೇವಾ ಪರಂಪರೆಯನ್ನು ಶ್ರೀಮತಿ ಜಯಲಕ್ಷ್ಮಮ್ಮ ತೀನಂಶ್ರೀಯವರು ಮಗನ ಮೂಲಕ ಪ್ರತಿಷ್ಠಾನದ ಆಶ್ರಯದಲ್ಲಿ ಮುಂದು ವರಿಸಿದ್ದಾರೆ.

**೪. ಪ್ರೊ|| ಬಿ. ರಾಮಸ್ವಾಮಿ :**

ಅವರು ಕನ್ನಡದ ಹಿರಿಯ ಸಾಹಿತಿ-ವಿದ್ವಾಂಸರು. 90 ವರ್ಷಗಳ ತುಂಬು ಜೀವನ ನಡೆಸಿದ್ದರು. ಹೈದರಾಬಾದಿನ ಉಸ್ಮಾನಿಯ ವಿಶ್ವವಿದ್ಯಾಲಯದ ನಿವೃತ ಕನ್ನಡ ವಿಭಾಗದ ಮುಖ್ಯಸ್ಥರೂ ಪ್ರಾಧ್ಯಾಪಕರೂ ಆಗಿದ್ದ ಶ್ರೀಯುತರು ದಿನಾಂಕ 13-02-2001ರಂದು ಹೈದರಾಬಾದಿನ ತಮ್ಮ ಸ್ವಗೃಹದಲ್ಲಿ ನಿಧನರಾದರು. ಕನ್ನಡ ಸಾಹಿತ್ಯದ ಬಗ್ಗೆ ಆಳವಾದ ಅಧ್ಯಯನ ಮಾಡಿದ್ದ ದಿವಂಗತರು ಪರಂಪರೆಯಿಂದ ಸಾಹಿತ್ಯಾಸಕ್ತಿಯನ್ನು ರೂಢಿಸಿಕೊಂಡಿದ್ದವರು. ದಿವಂಗತರು 19ನೇ ಶತಮಾನದ ಅದ್ವೈತ ಕೀರ್ತನಕಾರರಾದ ತುರುವೇಕೆರೆ ಬೇಟೆರಾಯ ದೀಕ್ಷಿತರ ಪುತ್ರರೂ ಆಗಿದ್ದರು. ಹಲವಾರು ವಿದ್ವತ್‌ಪೂರ್ಣ ಗ್ರಂಥಗಳನ್ನು ನೂರಾರು ಲೇಖನಗಳನ್ನು ಬರೆದು ಸಾಹಿತ್ಯ ವಲಯದಲ್ಲಿ ಜನಜನಿತರಾಗಿದ್ದ ದಿವಂಗತರ ಪ್ರಮುಖ ಕೃತಿಗಳೆಂದರೆ 'ಶ್ರೀಕೃಷ್ಣದೇವರಾಯ ಜೀವನ - ಸಾಧನೆ' ರಾಯ ವಾಚಕಮು ಮತ್ತು ಕೃಷ್ಣದೇವರಾಯ ದಿನಚರಿ - ತೌಲನಿಕ ಅಧ್ಯಯನ, 'ಬೇಟೆರಾಯ ದೀಕ್ಷಿತರ ದೇವರನಾಮಗಳು' ಮುಂತಾದವು ಡಾ|| ಜಿ. ಎಸ್. ದೀಕ್ಷಿತ್, ಡಾ|| ಶ್ರೀನಿವಾಸ ರಿತ್ತಿ ಅವರೊಂದಿಗೆ ಸೇರಿ ಸೋಮದೇವನ ನೀತಿ ವಾಕ್ಯಾಮೃತದ ಕನ್ನಡ ಟೀಕನ್ನು ಈಚೆಗೆ ಸಂಪಾದಿಸಿದ್ದು ಅದಿನ್ನೂ ಕನ್ನಡ ವಿಶ್ವವಿದ್ಯಾನಿಲಯದಿಂದ ಹೊರಬರಬೇಕಿದೆ.

ಐತಿಹಾಸಿಕ ರತ್ನ ಶ್ರೀ ಎಸ್. ಶ್ರೀಕಂಠಯ್ಯನವರ ವಂಶಸ್ಥರೂ ಆಗಿದ್ದ ರಾಮಸ್ವಾಮಿಯವರು ಪ್ರತಿಷ್ಠಾನದ ಸಂಸ್ಥಾಪಕರಾಗಿದ್ದ ಪ್ರೊ|| ಎಂ. ವಿ. ಸೀತಾರಾಮಯ್ಯನವರ ಸಹಪಾಠಿಗಳಾಗಿದ್ದರು. ಪ್ರತಿಷ್ಠಾನದ ಹಿತೈಷಿಗಳೂ, ಗೌರವ ಸದಸ್ಯರೂ ಆಗಿದ್ದು ಉದಾರ ದಾನಿಗಳಾಗಿ ದತ್ತಿನಿಧಿ ಮತ್ತು ಕಟ್ಟಡ ನಿಧಿಗಳಿಗೆ ಕೊಡುಗೆ ನೀಡಿದ್ದರು. ಇವರ ನಿಧನದಿಂದ ಪ್ರತಿಷ್ಠಾನಕ್ಕೆ ಅಪಾರ ದುಃಖವಾಗಿರುವುದಲ್ಲದೆ ಕನ್ನಡ ಸಾಹಿತ್ಯ ಲೋಕಕ್ಕೆ ಹಿರಿಯ ತಲೆಮಾರಿನ ಕೊಂಡಿ ಕಳಚಿದಂತಾಗಿದೆ.

**೫. ವಿಜಯ ಸಾಸನೂರ :**

ದಿನಾಂಕ 1-3-2001ರಂದು ನಿಧನರಾದ ಖ್ಯಾತ ಕಾದಂಬರಿಕಾರ ವಿಜಯ ಸಾಸನೂರ (ಜನನ : ಏಪ್ರಿಲ್ 1948) ಕರ್ನಾಟಕ ರಾಜ್ಯದ ಹಿರಿಯ ಐ.ಪಿ.ಎಸ್. ಅಧಿಕಾರಿಗಳಾಗಿದ್ದರೂ ಸೃಜನಶೀಲ ಸಾಹಿತಿಗಳಾಗಿ ಹೆಸರು ಮಾಡಿದ್ದರು. ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರಚಾರ ಇಲಾಖೆ ಹಾಗೂ ಚಲನಚಿತ್ರ ಅಭಿವೃದ್ಧಿ ನಿಗಮ ಮುಂತಾದೆಡೆಯಲ್ಲೂ ಅಧಿಕಾರಿಗಳಾಗಿದ್ದು ಸಾಹಿತ್ಯ ಮತ್ತು ಸಂಸ್ಕೃತಿಯ ಪ್ರವರ್ಧಮಾನಕ್ಕೆ ದುಡಿದಿದ್ದಾರೆ. ಪತ್ತೇದಾರಿ ಕಾದಂಬರಿ, ಕಥೆ ಕಾದಂಬರಿಗಳನ್ನು ರಚಿಸುವುದರಲ್ಲಿ ಸಿದ್ಧರು. ಇವರು ಸುಮಾರು ಹತ್ತು ಕಾದಂಬರಿಗಳು 7 ಕಥಾಸಂಕಲನಗಳನ್ನು ಪ್ರಕಟಿಸಿದ್ದಾರೆ. ವಿಗ್ರಹಚೋರರು (ಮಹಾಪ್ರಚಂಡರು) ಅಜಿತ್ ಯಶಸ್ವಿ ಚಲನಚಿತ್ರಗಳಾಗಿವೆ. ಯುದ್ಧ, ಇಂದ್ರಜಾಲ ಮುಂತಾದವು ಜನಪ್ರಿಯ ಕೃತಿಗಳು.

**೬. ಆರ್. ಎಲ್. ಅನಂತರಾಮಯ್ಯ :**

ದಿನಾಂಕ 14-3-2001ರಂದು ಮೈಸೂರಿನಲ್ಲಿ ನಿಧನರಾದ ಅನಂತರಾಮಯ್ಯನವರು (ಜನನ : 10-5-1937) ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದಲ್ಲಿ ಹಿರಿಯ ಅಧಿಕಾರಿಯಾಗಿದ್ದರು. ಶ್ರೀಯುತರು ಪುಸ್ತಕ ಪ್ರಕಟಣೆ ಮತ್ತು ಪ್ರಕಾಶನೋದ್ಯಮದ ಬಗ್ಗೆ ಕಾಳಜಿ ವಹಿಸುತ್ತಿದ್ದರು. 'ಗ್ರಂಥಲೋಕ'ವೆಂಬ ವಿಶಿಷ್ಟ

ಪತ್ರಿಕೆಯನ್ನು ಏಕಾಂಗಿಯಾಗಿ ಹಲವು ವರ್ಷ ನಡೆಸಿದ ಹೆಗ್ಗಳಿಕೆ ಇವರದು. ಇವರು ಸೃಜನಶೀಲ ಸಾಹಿತಿಗಳೂ ಹೌದು. ಪ್ರಸಿದ್ಧ ಪತ್ರಿಕೋದ್ಯಮ ಪತ್ರಿಕೆ 'ಗ್ರಂಥಸೂಚಿ'ಯ ಸಂಪಾದಕರಾಗಿ, ಪ್ರಕಾಶಕರಾಗಿ ಹಲವು ವರ್ಷ ದುಡಿದಿದ್ದರು.

ಇವರ ಪ್ರಮುಖ ಕೃತಿಗಳು ಕೀರ್ತನದರ್ಪಣ (ಭಾಗ-1) ಪ್ರಾಯೋಗಿಕ ಸಂಗೀತಶಾಸ್ತ್ರ ಕೀರ್ತನ ದರ್ಪಣ ಭಾಗ-2 ಸಂಪಾದಿಸಿದ್ದಾರೆ. ಶಿಕ್ಷಣದ ಸಾಹಸ ಕಥೆ. ಭಾರತೀಯ ಸಂಸ್ಕೃತಿ ಪರಂಪರೆ, ನಕ್ಷಾಶಾಸ್ತ್ರದ ಮೂಲತತ್ವಗಳು, ಪ್ರಾಕೃತಿಕ ಭೂಗೋಳ ವಿಜ್ಞಾನ, ಭಾರತದಲ್ಲಿ ಸಂವಿಧಾನಾತ್ಮಕ ಸರ್ಕಾರ, ಪಂಪಭಾರತ ಕಥಾಲೋಕ, ಭಾರತೀಯ ರಂಗಭೂಮಿ, ರಂಗ ಸೌರಭ, ಮಗ್ಗೆಯ ಮಾಯಿದೇವ, ವಡ್ಡಾರಾಧನೆ ಕಥಾಲೋಕ, ಶಿಕ್ಷಣದ ಸಾಹಸ ಕಥೆ, ಸ್ವಾತಂತ್ರ್ಯ ಹೋರಾಟ ಮುಂತಾದವು. ಪ್ರತಿಷ್ಠಾನದ ಹಿತೈಷಿಗಳಾಗಿದ್ದ ದಿವಂಗತರು ತಮ್ಮಲ್ಲಿದ್ದ ಅಮೂಲ್ಯ ಗ್ರಂಥ ಸಂಗ್ರಹವನ್ನು ಪ್ರತಿಷ್ಠಾನಕ್ಕೆ ದಾನ ಮಾಡಿದ ಉದಾರಿಗಳಾಗಿದ್ದರು.

**೭. 'ಸಿಸು' ಸಂಗಮೇಶ :**

ದಿನಾಂಕ 29-5-2001ರಂದು ನಿಧನರಾದ ಶಿಶು ಸಂಗಮೇಶ, ಖ್ಯಾತಿವೆತ್ತ ಮಕ್ಕಳ ಸಾಹಿತಿ. ಸಂಗಮೇಶ ಸಿದ್ಧರಾಯಪ್ಪ ಮನಗೊಂಡ ಅವರು (ಜನನ : 29-4-2001) ಶಿಶು ಸಾಹಿತ್ಯ ಕ್ಷೇತ್ರದಲ್ಲಿ ಚಿರಪರಿಚಿತ ಹೆಸರು. ಮೂವತ್ತಾರು ವರ್ಷಗಳ ದೀರ್ಘಕಾಲ ಶಿಕ್ಷಣ ಕ್ಷೇತ್ರದಲ್ಲಿ ನಿಸ್ಪೃಹ ಸೇವೆ ಮಾಡಿ ಉತ್ತಮ ಶಿಕ್ಷಕರೆಂದೂ ರಾಜ್ಯ ಹಾಗೂ ರಾಷ್ಟ್ರದ ಪ್ರಶಸ್ತಿ ಗಳಿಸಿದ್ದಾರೆ. ನಾಲ್ಕು ದಶಕಕ್ಕೂ ಹೆಚ್ಚು ಕಾಲದಿಂದ ಮಕ್ಕಳ ಸಾಹಿತ್ಯ ಕ್ಷೇತ್ರವನ್ನು ಸಂಪನ್ನಗೊಳಿಸಿದ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. 'ಭಾರತೀ ಸಾಹಿತ್ಯ ಭಂಡಾರ (1954), ಬಾಲಭಾರತಿ (ಮಾಸಪತ್ರಿಕೆ) 1978, ಕರ್ನಾಟಕ ಮಕ್ಕಳ ಸಾಹಿತ್ಯ ಅಕಾಡೆಮಿ (1983), ಸಾಧಿಸಿ ಮಕ್ಕಳ ಸಾಹಿತ್ಯ ಕ್ಷೇತ್ರಕ್ಕೆ ಅಪಾರ ಕೊಡುಗೆಗಳನ್ನು ನೀಡಿದ್ದಾರೆ. ಇವರ ಕೃತಿ ಪಕ್ಷಿ ವಿಜ್ಞಾನದ ಹಿನ್ನೆಲೆಯಲ್ಲಿ ರಚಿತಗೊಂಡಿರುವ 'ನನ್ನ ಮನೆ' (1903) ಜಪಾನಿನ ಜನಜೀವನ ನಿರೂಪಿಸಿರುವ 'ನನ್ನ ಗೆಳೆಯ ಜಪಾನದ ಬಾ' (1908) ರಾಷ್ಟ್ರಪ್ರಶಸ್ತಿಗಳಿಸಿವೆ. 'ನನ್ನ ಗೆಳೆಯ ಎಸ್ಕಿಮೋ ಇಗ್ಲಿಯನ್' (1980) ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಪಡೆದಿದೆ. 'ಮೊಲದ ಮೂಗು ಮೊಂಡಾಯಿತು' ಕಾವ್ಯಾನಂದ ಪ್ರಶಸ್ತಿಗೆ ಪಾತ್ರವಾಗಿದೆ. ಇತರ ಕೃತಿಗಳು ನರಿಯ ಫಜೀತಿ, ಯಾರು ಜಾಣರು, ಮಂಕುಮರಿ, ಮರಿಯ ಜಿಂಕೆ, ಕಳ್ಳ ಸಿಕ್ಕ, ಚತುರ ಚಾಣಾಕ್ಷ, ಹೊರನಾಡ ರೈತರು, ಪುಟ ಚಂಡು ಭಾಗ-1, ಭಾಗ-2, ಆಣೆಕಲ್ಲು ಭಾಗ-1, ಭಾಗ-2, ನಾವು ನಮ್ಮವರು (2 ಭಾಗ) ಸೀತನಿ ಸುಗಾಯಿ, ಪಂಚಗಂಗೆ, ಅನಿಬತ್ತಾನಿ, ಮಡಿಗೊಂಚಲು, ಮಕ್ಕಳ ಸಾಹಿತ್ಯ 1984 ಮುಂತಾದವು.

ಇವರ ಅವಿರತ ಸಾಹಿತ್ಯ ಸೇವೆಯನ್ನು ಮೆಚ್ಚಿ ಬಿಜಾಪುರ ಜಿಲ್ಲಾ ಪರಿಷತ್ತು 1978ರಲ್ಲಿ 'ಶಿಶು ಸಾಹಿತ್ಯ ಶಿಲ್ಪಿ' ಬಿರುದಿತ್ತು ಸನ್ಮಾನಿಸಿದೆ.1980ರಲ್ಲಿ ರಾಜ್ಯ ಸರ್ಕಾರ 'ಆದರ್ಶ ಶಿಕ್ಷಕ' ಪ್ರಶಸ್ತಿ ನೀಡಿ ಅವರ ಸೇವೆಯನ್ನು ಗುರುತಿಸಿದೆ. ಕೆಲಕಾಲ ಸಾಹಿತ್ಯ ಅಕಾಡೆಮಿಯ ಸದಸ್ಯರೂ ಆಗಿದ್ದರು. ಪ್ರತಿಷ್ಠಾನದ ಸಾವಿತ್ರಮ್ಮ ದತ್ತಿಯ ಮಕ್ಕಳ ಸಾಹಿತ್ಯ ಪ್ರಶಸ್ತಿಯನ್ನು 1998ರಲ್ಲಿ ಪಡೆದಿದ್ದರು.

ಈ ಎಲ್ಲ ಮಹನೀಯರುಗಳಿಗೆ ಚಿರಶಾಂತಿ ದೊರೆಯಲೆಂದು ಪ್ರತಿಷ್ಠಾನ ಪ್ರಾರ್ಥಿಸುತ್ತದೆ.



# ಲೇಖಕರ ವಿಳಾಸಗಳು

೧. ಎಂ. ಆರ್. ಅನಂತರಾಮಯ್ಯ
ೱ೪, ೩೦ಚರ, ೧ನೇ 'ಡಿ' ಮುಖ್ಯರಸ್ತೆ,
ಗಿರಿನಗರ, IIನೇ ಹಂತ, ಬೆಂಗಳೂರು-೫೬೦ ೦೮೫.

೨. ಡಾ|| ಪಿ. ವಿ. ನಾರಾಯಣ
ತಂಗಾಳಿ, ೩೦, ಆರ್.ಬಿ.ಐ. ಕಾಲೋನಿ
೩ನೇ ಬ್ಲಾಕ್, ಜಯನಗರ (ಪೂರ್ವ)
ಬೆಂಗಳೂರು-೫೬೦ ೦೧೧

೩. ವಿದ್ವಾನ್ ಟಿ. ಕೇಶವಭಟ್
೭೫೪/೪, ೧೫ನೇ ಮೇನ್,
ಬನಶಂಕರಿ IIನೇ ಹಂತ
ಬೆಂಗಳೂರು-೫೬೦ ೦೭೦.

೪. ಗಮಕಿ ಆರ್. ಶಂಕರನಾರಾಯಣ್
'ಸತ್ಯಶ್ರೀ' ೬೭, ಐ.ಟಿ.ಐ. ಬಡಾವಣೆ
ವಿದ್ಯಾಪೀಠ, ಬನಶಂಕರಿ IIIನೇ ಹಂತ
ಬೆಂಗಳೂರು-೫೬೦ ೦೮೫.

೫. ಕೆ. ವಿ. ರಾಜಗೋಪಾಲ್
೭೫೪/೪, ೧೫ನೇ ಮೇನ್
ಬನಶಂಕರಿ IIನೇ ಹಂತ
ಬೆಂಗಳೂರು-೫೬೦ ೦೭೦

೬. ಪ್ರೊ|| ನಾ. ಗೀತಾಚಾರ್ಯ
ನಂ. ೧, ೫ನೇ ಕ್ರಾಸ್
ಕೆಂಪೇಗೌಡನಗರ
ಬೆಂಗಳೂರು-೫೬೦ ೦೧೯.

೭. ಡಾ॥ ಕಬ್ಬಿನಾಲೆ ವಸಂತಭಾರದ್ವಾಜ
ಸಹಾಯಕ ವ್ಯವಸ್ಥಾಪಕ
ಮೈಸೂರು ಬ್ಯಾಂಕ್
ಸೋಮವಾರಪೇಟೆ-೫೭೧ ೨೩೬

೮. ಸೀತಾರಾಮ ಜಾಗೀರದಾರ
ನಂ. ೪೬೬ 'ಬಿ' IIIನೇ ಮೇನ್
೭ನೇ ಕ್ರಾಸ್, ಸರಸ್ವತಿಪುರಂ
ಮೈಸೂರು-೫೭೦ ೦೦೯.

೯. ಪ್ರೊ॥ ಜಿ. ಅಶ್ವತ್ಥನಾರಾಯಣ
ನಂ. ೯೫, ೩೪ 'ಬಿ' ಕ್ರಾಸ್, ೧೬ನೇ ಮೇನ್
೪ನೇ 'ಟಿ' ಬ್ಲಾಕ್, ಜಯನಗರ
ಬೆಂಗಳೂರು-೫೬೦ ೦೪೧.

೧೦. ಡಾ॥ ನ. ಸುಬ್ರಹ್ಮಣ್ಯಂ
೨೭೪/ಡಿ, ೩೭ನೇ ಕ್ರಾಸ್,
೮ನೇ ಬ್ಲಾಕ್, ಜಯನಗರ
ಬೆಂಗಳೂರು-೫೬೦ ೦೮೨.

೧೧. ಸತ್ಯನಾರಾಯಣ ಬಿ. ಆರ್.
ಗ್ರಂಥಪಾಲಕರು
ಸುರಾನ ಕಾಲೇಜು
ಬೆಂಗಳೂರು-೫೬೦ ೦೦೪.



## ಪ್ರತಿಷ್ಠಾನದ ಗೌರವ ಸದಸ್ಯರು

1) ಪ್ರೊ|| ಎ. ಎನ್. ಮೂರ್ತಿರಾವ್ 2) ಪ್ರೊ|| ಎಸ್. ವಿ. ಪರಮೇಶ್ವರಭಟ್ಟ
2) ಡಾ|| ಜಿ. ಎಸ್. ದೀಕ್ಷಿತ್ 4) ವಿದ್ವಾನ್ ಎನ್. ರಂಗನಾಥಶರ್ಮ
5) ಪ್ರೊ|| ಗರ್ಗೇಶ್ವರಿ ವೆಂಕಟಸುಬ್ಬಯ್ಯ 6) ಗೌರೀಶ ಕಾಯ್ಕಿಣಿ
7) ಶ್ರೀಮತಿ ಶಾಂತಾದೇವಿ ಮಾಳವಾಡ

## ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಕಳಿಸಬೇಕು

ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ. ಆದರೆ, ಕಳಿಸಿದರೆ ವೈಶಿಷ್ಟ್ಯವುಳ್ಳ ಅಂಥ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ ಮಾಡಿಸಲಾಗುವುದು.

## ವಿನಿಮಯ ಪತ್ರಿಕೆಗಳು

1) ಪ್ರಬುದ್ಧ ಕರ್ಣಾಟಕ, ಮಾನವಿಕ ಕರ್ಣಾಟಕ, ವಿಜ್ಞಾನ ಕರ್ಣಾಟಕ, ಮೈಸೂರು. 2) ಸಾಧನೆ, ಬೆಂಗಳೂರು 3) ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಬೆಂಗಳೂರು, 4) ಮಿಥಿಕ್ ಸೊಸೈಟಿ ಜರ್ನಲ್ 5) ಬಸವ ಪಥ, ಬೆಂಗಳೂರು. 6) ಶಂಕರ ಭಾಸ್ಕರ, ಬೆಂಗಳೂರು. 7) ಧರ್ಮಪ್ರಭ, ಬೆಂಗಳೂರು 8) ಜಾನಪದ ಜಗತ್ತು, ಬೆಂಗಳೂರು. 9) ಅನ್ವೇಷಣೆ, ಬೆಂಗಳೂರು. 10) ಅಪರಂಜಿ, ಬೆಂಗಳೂರು, 11) ಕರ್ನಾಟಕ ಭಾರತಿ, ಧಾರವಾಡ. 12) ಸುಗುಣಮಾಲಾ, ಉಡುಪಿ, 13) ಸತ್ಯಶುದ್ಧ ಕಾಯಕ, ಚಿತ್ರದುರ್ಗ, 14) ತರಳಬಾಳು, ಸಿರಿಗೆರೆ, 15) ಅಭಿಮತ, ದೆಹಲಿ.

## ಕರ್ನಾಟಕ ಲೋಚನ ಚಂದಾ ವಿವರ

ವಾರ್ಷಿಕ ಚಂದಾ : ವ್ಯಕ್ತಿಗಳಿಗೆ ರೂ. 15-00
ಗ್ರಂಥಾಲಯ, ಸಂಘ ಸಂಸ್ಥೆಗಳಿಗೆ ರೂ. 25-00
ಅಜೀವ : ರೂ. 150-00
ಬಿಡಿ ಪ್ರತಿ ರೂ. 10-00
ಪ್ರತಿಷ್ಠಾನದ ಸದಸ್ಯರಿಗೆ ಲೋಚನ ಉಚಿತ.
ಪ್ರತಿಷ್ಠಾನದ ಸದಸ್ಯತ್ವ : ವಾರ್ಷಿಕ ರೂ. 25-00 ಅಜೀವ ರೂ. 250-00

KARNATAKA LOCHANA-Half Yearly Journal
Published by B. M. Sri Smaraka Prathishthana, N. R. Colony, Bangalore-560 019.
Printed by : Prathibha Printers, Bangalore-560 019. Ph. : 6692113

'ಪ್ರತಿಷ್ಠಾನಕ್ಕೆ ಘನತೆಯನ್ನು ತಂದುಕೊಟ್ಟಿರುವ ಲೋಚನ ವಿದ್ವತ್ ಪತ್ರಿಕೆಯು ಸೀತಾರಾಮಯ್ಯನವರ ಆಶಯಕ್ಕನುಗುಣವಾಗಿ ಅದೇ ಗುಣಮಟ್ಟದಲ್ಲಿ ಮುಂದುವರಿಯುತ್ತಿರುವುದು ಅತ್ಯಂತ ಸಂತೋಷದ ಸಂಗತಿ......''

**-ಡಾ|| ಆರ್. ಶೇಷಶಾಸ್ತ್ರೀ**

ಕೃಷ್ಣದೇವರಾಯ ವಿಶ್ವವಿದ್ಯಾಲಯ, ಅನಂತಪುರ.



''ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಸಾಹಿತ್ಯ ಕ್ಷೇತ್ರದಲ್ಲಿ ಧ್ರುವತಾರೆಯಾಗಿ ಬೆಳೆಯುತ್ತಿದೆ. ನಾಡಿಗೆ ಹೆಮ್ಮೆ ತರುವಂತಹ ಈ ಸಂಸ್ಥೆ ನಮ್ಮ ಬಡಾವಣೆಯಲ್ಲಿರುವುದು ಒಂದು ಹೆಮ್ಮೆ...''

**-ಪ್ರೊ|| ಎಂ. ಆರ್. ದೊರೆಸ್ವಾಮಿ**

ಸಂಸ್ಥಾಪಕರು, ಪಿ.ಇ.ಎಸ್. ಶಿಕ್ಷಣ ಸಂಸ್ಥೆಗಳು, ಹನುಮಂತನಗರ.



''ಬಿ.ಎಂ.ಶ್ರೀ ಪ್ರತಿಷ್ಠಾನ ಕರ್ನಾಟಕದಲ್ಲೇ ಶ್ರೇಷ್ಠ ಸಂಶೋಧನ ಕೇಂದ್ರವಾಗಿದೆ. ಅದರ ಪ್ರಕಟಣೆಗಳು-ಪತ್ರಿಕೆ-ಚಟುವಟಿಕೆಗಳು ಕನ್ನಡ ಸಂಶೋಧನ ಕ್ಷೇತ್ರದಲ್ಲೇ ಪ್ರಮುಖವಾದವು....''

**-ಡಾ|| ಟಿ. ವಿ. ವೆಂಕಟಾಚಲಶಾಸ್ತ್ರೀ**, ಮೈಸೂರು



ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ